# ಕೊರವಂಜಿ



ಫೆಬ್ರುವರಿ ೧೯೪೪

ಮಾಸ ಪತ್ರಿಕೆ

ಸಂಪಾದಕರು :
ಶ್ರೀ॥ ರಾ. ಶಿ.

ಚಿತ್ರಕಾರರು :
ಶ್ರೀ॥ ಆರ್. ಕೆ. ಲಕ್ಷ್ಮಣ್.

ಬರಹಗಾರರು :

ಶ್ರೀ॥ ನಾ. ಕ.
ಶ್ರೀ॥ ಪಾಟಾಳಿ
ಶ್ರೀ॥ ಎಸ್. ಎಸ್. ಶಿ.
ಶ್ರೀ॥ ಡಿ. ವಿ. ಜಿ.
ಶ್ರೀ॥ ಮರಿಪುಟ್ಟು
ಶ್ರೀ॥ ಖಾರಾಂತ
ಶ್ರೀಮತಿ ಕೇಸರಿ
ಶ್ರೀ॥ ಬೀರಣ್ಣ

ಬಿಡಿ ಪತ್ರಿಕೆ - - ಕೇವಲ ಎರಡಾಣೆ

ಶ್ರೀ ನಗೆಯ ಮಾಸ ಪತ್ರಿಕೆ.

# ಕೊರವಂಜಿ

ಕೊರವಂಜಿಯು ತಿಳಿನಗೆಯ ಸಚಿತ್ರ ಮಾಸಪತ್ರಿಕೆ. ತಿಳಿಹಾಸ್ಯದ ಲೇಖನಗಳು, ಹರಟೆಗಳು, ಅಣಕವಾಡುಗಳು, ನಗೆ ಹಾಡುಗಳು ಇವುಗಳಿಗೆ ಸರ್ವದಾ ಸುಸ್ವಾಗತವುಂಟು. ಆದರೆ ವ್ಯಕ್ತಿಯನ್ನುದ್ದೇಶಿಸಿ ಬರೆದ ಲೇಖನಗಳಿಗೆ ಎಡೆಯಿಲ್ಲ.

ಲೇಖನಗಳನ್ನು ಕಳುಹಿಸುವವರು ತಮ್ಮಲ್ಲಿ ಒಂದು ಪ್ರತಿಯನ್ನಿಟ್ಟುಕೊಂಡರೆ ಬಹಳ ಒಳಿತು. ಸುಲಭವಾಗಿ ಓದುವಂತೆ ತಿಳಿಬರಹದಲ್ಲಿ ಬರೆದರೆ, ಅಚ್ಚಾದಾಗ ತಪ್ಪುನೆಪ್ಪುಗಳು ಕಡಿಮೆಯಾಗುವುವು.

ಸಂಪಾದಕೀಯ ಪತ್ರವ್ಯವಹಾರಗಳನ್ನು ಸಂಪಾದಕರಲ್ಲೂ ವ್ಯವಸ್ಥಾಪಕರಲ್ಲಿ ಮಿಕ್ಕ ವಿಚಾರಗಳನ್ನೂ ಪ್ರಸ್ತಾಪಿಸಬೇಕು.

ಬಳೇಪೇಟೆ, ಬೆಂಗಳೂರು ಸಿಟಿ.

**ವಾರ್ಷಿಕ ಚಂದಾ ಅಂಚೆ ಮೂಲಕ ರೂ. ೨—೦—೦**

**ಬಿಡಿ ಪ್ರತಿ ಕೇವಲ ಆಣೆ ೦—೨—೦**

---

ಚಂದಾದಾರರು ವಿಳಾಸ ಬದಲಾವಣೆಯಾದಲ್ಲಿ, ಕೂಡಲೆ ನಮಗೆ ತಿಳಿಸಿದರೆ, ಬಹಳ ಸಹಾಯ ಮಾಡಿದಂತಾಗುವುದು.

---

## ವಿಷಯಾನುಕ್ರಮಣಿಕೆ

ಸಕಲವೂ ಪ್ರಿಯವಾದ

ಸಮರ ಕಾಲದಲ್ಲಿ



- ನಿಮಗೆ ಪ್ರಿಯವಾದ -

# "ರಾಜಾ ಸ್ನೋ"

ವನ್ನು ಜಾಗರೂಕತೆಯಿಂದ ಉಪಯೋಗಿಸಿ



## ಚರ್ಮದ ಯೌವನವನ್ನು ಕಾಪಾಡುವುದು

ಮೈಸೂರು ಸ್ಯಾಂಡಲ್ ಸೋಪು ನಿಮ್ಮ ಚರ್ಮದ ಯೌವನವನ್ನು ಕಾಪಾಡುವುದಲ್ಲದೆ, ನಿಮ್ಮ ಅಂಗ ವರ್ಚಸ್ಸನ್ನೂ ಹೆಚ್ಚಿಸುವುದು. ಈ ಅಪೂರ್ವ ಸಾಬೂನಿನ ಒಂದು ಬಿಲ್ಲೆಯನ್ನು ಉಪಯೋಗಿಸಲು ನಿಮ್ಮನ್ನು ಆಹ್ವಾನಿಸುವೆವು.




## ಮೈಸೂರು ಸ್ಯಾಂಡಲ್ ಸೋಪ್




ಸಂಪುಟ ೨] ಕೊರವಂಜಿ—ಫೆಬ್ರವರಿ ೧೯೪೪ [ಸಂಚಿಕೆ ೧೧

# ಕು ಹ ಕಿ ಡಿ ಗ ಳು

—

ಜರ್ಮನಿಯಲ್ಲಿಯೂ ಸಂಕ್ರಾಂತಿಯನ್ನು ಸಾಂಗವಾಗಿ ಆಚರಿಸಿದರಂತೆ.

—ಜನರೆಲ್ಲರೂ ಎಳ್ಳು ನೀರನ್ನು ನಾಯಕರಿಗೆ ಬೀರಿದರಂತೆ.

✤ ✤ ✤

ಬೆಂಗಳೂರಿನಲ್ಲಿ ಎರಡು ಚಿರತೆಗಳು ಸಿಕ್ಕಿದುವಂತೆ.

—ಓಹೋ! ಕಾಡಿನಲ್ಲೂ ರೇಷನಿಂಗ್ ಶುರುವಾಗಿದೆಯೋನೋ!

✤ ✤ ✤

ಹೌದು! ಹೌದು! ಚಿರತೆ ಅಡಿಗೆ ಮನೆಯಲ್ಲಿಯೇ ಅವಿತುಕೊಂಡಿತ್ತಂತೆ.

ಅಂದ ಮೇಲೆ, ಖಂಡಿತವಾಗಿಯೂ ಕಾಡಿನಲ್ಲಿ ಹೊಟ್ಟೆಗಿಲ್ಲದೆ ಊರ ಅಡಿಗೆ ಮನೆಗೆ ಮೊದಲು ಚಿರತೆಗಳು ಹೊಕ್ಕಿರಬೇಕು.

✤ ✤ ✤

"ಶಸ್ತ್ರ ಸನ್ಯಾಸ ವಿಶ್ವಶಾಂತಿಗೆ ಮೂಲ." ಎಂದು ಶ್ರೀಯುತ ಶ್ರೀನಿವಾಸ ಶಾಸ್ತ್ರಿಗಳು ಹೇಳಿದರೆಂದು ದಿನಪತ್ರಿಕೆಯ ಸುದ್ದಿ.

—ಆಹಾ! ಇದೇ ಮಾತೇ ೧೯೧೮ರಲ್ಲಿ ಘೋಷಿಸಲ್ಪಟ್ಟಿತು.

✤ ✤ ✤

ಪೌರಸಭಾಧ್ಯಕ್ಷರ ಚುನಾವಣೆಯಲ್ಲಿ ಒಂದು ಓಟು ನಿರರ್ಥಕವಾಯಿತಂತೆ.

—ಅಂದರೆ, ಓಟು ಮಾಡುವುದಕ್ಕೆ ಬಾರದವರೂ ಪೌರಸಭಾ ಸದಸ್ಯರೆಂದು ಹೇಳುವುದು ತಪ್ಪು—ಕೈತಪ್ಪು ಬೆಪ್ಪಾಗಿರಬಹುದು.

✤ ✤ ✤

ಇಂಗ್ಲೆಂಡು ಜರ್ಮನಿಯು ರಹಸ್ಯವಾಗಿ ಒಪ್ಪಂದ ಮಾಡುವರೆಂದು ಪ್ರಾವ್ಡಾ ಪತ್ರಿಕೆಯು ಹೇಳಿದೆಯಂತೆ.

—ಅಂದ ಮೇಲೆ, ಬಿಸಿಲು ಮಳೆ— ನಾಯಿ ನರಿಗಳ ಮದುವೆಯಂತೆ, ಯೂರೋಪಿನಲ್ಲಿ ಆಗಿರಲೇಬೇಕು.

✤ ✤ ✤

ಗವರ್ನರುಗಳೂ ಕೂಡ ತುಟ್ಟಿಭತ್ಯವನ್ನು ಕೇಳುತ್ತಿರುವರಂತೆ.

—ಹೋಗಲಿ, ತುಟಿಭಕ್ಷ್ಯವನ್ನು ಕೇಳಲಿಲ್ಲವಲ್ಲ.

✤ ✤ ✤

ಈಗ ಔಷಧಿಗಳೇ ಸಿಗುವುದಿಲ್ಲವಂತೆ.

—ರೋಗಿಗಳು ಬದುಕಿಕೊಂಡರು!

✤ ✤ ✤

ತಿನ್ನುವ ಆಹಾರದಂತೆಯೇ ಮನುಷ್ಯರು ಪರಿವರ್ತನೆಯಾಗುತ್ತಾರಂತೆ.

—ಬಟ್ಟತಲೆಗೆ ಹೆದರುವವರು ಮೊಟ್ಟೆಗಳನ್ನು ತ್ಯಜಿಸಬೇಕು.

✤ ✤ ✤

ಭಾರತವು ಸಮರೋದ್ಯಮವನ್ನು ಎಷ್ಟು ಚೆನ್ನಾಗಿ ಮಾಡುತ್ತಿದೆ ಎಂಬುದನ್ನು ಚಲನಚಿತ್ರದಲ್ಲಿ ತೋರಿಸುತ್ತಿದ್ದಾರಂತೆ.

—ಇದೇನೂ ಬೇಕಾಗಿಲ್ಲ! ತೆರಿಗೆ ಪಟ್ಟಿಯನ್ನು ನೋಡಿದಾಗಲೇ ನಮಗೆ ತಿಳಿದುಹೋಗಿತ್ತು.

✤ ✤ ✤

ಕರ್ಣಾಟಕದ ಗಡಿನಾಡಿನ ಪ್ರಶ್ನೆ ಮಹತ್ತರವಾಗಿದೆಯಂತೆ.

—ಓಹೋ! ಆರಂಭವಾಯಿತು ವಿಷ ಕರ್ಣಾಟಕ!

—o—

# ಉರಿಗಾಳು

ಶ್ರೀ ಸರೋಜಿನಿ ದೇವಿಯವರು ಪಂಜಾಬಿನಲ್ಲಿ ಭಾಷಣ ಮಾಡಬಾರದೆಂದು ಆಜ್ಞೆಯಾಗಿದೆಯಂತೆ.

—ಕೂಸು ಹುಟ್ಟುವುದಕ್ಕೆ ಮುಂಚೆಯೇ ಕುಲಾವಿಯೇ?

✤ ✤ ✤

ಇಡೀ ಭಾರತದಲ್ಲಿ ಸ್ವಾತಂತ್ರ ದಿನಾಚರಣೆ ನಡೆಯಿತಂತೆ.

—ಸ್ವ-ಅತಂತ್ರ-ಸ್ವಾತಂತ್ರವೇ?

✤ ✤ ✤

ಮಾರ್ವಾಡಿಗಳೆಲ್ಲರೂ ತಮ್ಮ ಹಕ್ಕುಗಳಿಗಾಗಿ ಕಾದಾಡುವರಂತೆ.

—ಇನ್ನೊಂದು ಹುಟ್ಟಿಕೊಂಡಿತೇ—ಬಾಕಿಸ್ತಾನ್!

✤ ✤ ✤

ಅಮೇರಿಕಾದಲ್ಲಿ ಸಾವಿರಾರು 'ಟ್ಯಾಂಕು'ಗಳನ್ನು ನಿರ್ಮಿಸುತ್ತಿರುವರಂತೆ.

—ನಮ್ಮ ದೇಶದಲ್ಲಿ ಬರಗಾಲಬಂದರೆ ಅಲ್ಲಿ ಯಾಕೋ?

✤ ✤ ✤

ಪೂರ್ಣ ಚಂದ್ರನನ್ನು ಕಂಡರೆ ಕವಿಗಳು ಕುಣಿದಾಡುತ್ತಾರಂತೆ.

—ಇದನ್ನು ನೋಡಿಯೇ ಚಂದ್ರನು ಕ್ಷಯಿಸುತ್ತಾನೆಂಬುದು ಸುಳ್ಳು.

✤ ✤ ✤

ಈ ಚುನಾವಣೆಗಳಿಂದ ಒಂದಾದರೂ ಪ್ರಯೋಜನ........

—ಕೆಲವು ಲಾಯರುಗಳಿಗೆ ಹಣವಾದರೂ ಸಿಕ್ಕುತ್ತೆ.—ತಕರಾರುಗಳಿಂದ.

✤ ✤ ✤

"ಕೂತುಕೊ ಎಂದರೆ, ಕೂತುಕೊಳ್ಳುತ್ತೇನೆ—ನಿಲ್ಲು ಎಂದರೆ, ನಿಲ್ಲುತ್ತೇನೆ" ಎಂದು ಅಮೆರಿಯವರ ಗುಮಾಸ್ತ ಹೇಳಿದನಂತೆ.

—ಓಹೋ! ವೈಸರಾಯಾಗಲು ಆಶೆಯೇನೋ?

✤ ✤ ✤

ನಮ್ಮೂರಿನ ಚಿತ್ರನಿರ್ಮಾಣಕರಿಗೆ ಕಚ್ಚಾ ಫಿಲಂ ದೊರೆತಿದೆಯಂತೆ.
—ಓಹೋ ! ಅದಕ್ಕೇ ಚಿತ್ರವೂ ಕಚ್ಚಾ !

✣ ✣ ✣

ಉಸ್ಮೇನಿಯಾ ವಿಶ್ವವಿದ್ಯಾಲಯದಲ್ಲಿ ಶ್ರೀಯುತ ರಾಜಾಜೀಯವರು—
—ಈಗ ಹಿಂದೂಸ್ಥಾನಿ ಚಳುವಳಿಯೇ ?

✣ ✣ ✣

ಎ. ಆರ್. ಪಿ. ದಳದವರು ಈಗ ಏನುಮಾಡುತ್ತಿದ್ದಾರೆ ?—ಪ್ರಶ್ನೆ.
—ಈಗ ಕೆಲಸ ಮಾಡುತ್ತಿದ್ದಾರೆ.

✣ ✣ ✣

ಪರೀಕ್ಷೆ ಕಾಲವು ಹತ್ತಿರ ಬಂತಂತೆ.
—ಹಾಗೂ ಕಾಮನ ಹಬ್ಬವೂ ಬಂತು.

✣ ✣ ✣

ಆಹ್ವಾನ ಪತ್ರಿಕೆಗಳು ಸಣ್ಣದಾಗಿಯೇ ಇರಬೇಕೆಂದು ಆಜ್ಞೆ.
—ಹೊಸ ಹಣವಂತರಿಗೆ ಬಂತಲ್ಲಾ ಕಷ್ಟ !

✣ ✣ ✣

ರುಮಾಲಿನ ಸರಿಗೆಯನ್ನೂ ರೇರ್ಷ ಮಾಡುತ್ತಾರಂತೆ.
—ಹೀಗಾಗಬಹುದೇ ? ಅಧಿಕಾರಿಗಳ ಅದಬ್ ಅರ್ಧ ಇಳಿದು ಹೋಗುತ್ತಲ್ಲ !

✣ ✣ ✣

ಆಯುರ್ವೇದದ ಪ್ರಗತಿಯು ಯಶಸ್ವಿಯಾಗಿ ನಡೆಯುತ್ತಿದೆ.—ಸುದ್ದಿ.
—ಅಂದ ಮೇಲೆ ಪ್ರೌಢಶಿಕ್ಷಣಕ್ಕಾಗಿ ವಿಲಾಯಿತಿಗೆ ಯಾವ ಆಯುರ್ವೇದ ಪದವೀಧರರನ್ನು ಕಳುಹಿಸುತ್ತಾರೆ ?

✣ ✣ ✣

# ಹಿಂದೀ ಪ್ರಚಾರ

ಆಠೀನ್ ತುರುಫಲ್ವೇನೊ?

ಡೈಮಂಡ್ ಹಾಕೋ!

ನೈಲಾ ನಾನಿಳಿದಿದ್ದು!

ದಹಿಲಾ ಎಲ್ಲಿ ಹೋಯ್ತೋ?

ಖಬರ್‌ದಾರ್—ಯಾಕೋ ಹೊಡಕೊಳ್ಳುತ್ತೀರಿ?

ಪೈಸಾ ದೇದಾಲೋಬಾ!—

ಲಾವ್ರೇ—ಏಕ್ ಸಿಗರೇಟ್!

ದೂರದಲ್ಲಿ ಯಾವುದೋ ಪುಸ್ತಕ ಓದುತ್ತಾ ಕುಳಿತ ನನಗೆ ಈ ಮಾತುಗಳು ಆಗಿಂದಾಗ್ಗೆ ಕೇಳಿಬರುತ್ತಿತ್ತು. ಇಷ್ಟು ಹೊತ್ತಿಗೆ ನಿಮಗೆಲ್ಲಾ ಗೊತ್ತೇ ಆಗಿರುತ್ತೆ—ನನ್ನ ಸ್ನೇಹಿತರು ನಾಲ್ವರು ಆ ಕಡೆ ಇಸ್ಪೀಟ್ ಆಟಕ್ಕೆ ಆರಂಭಿಸಿ ಆರು ಗಂಟೆ ಆಗಿತ್ತು. ಮಧ್ಯೆ ಮಧ್ಯೆ ಆಡುತ್ತಿದ್ದ ಈ ಮಾಸಲ ಹಿಂದಿ ಮಿಶ್ರ ಕನ್ನಡ ಮಾತುಗಳು.—ಓದುವುದಕ್ಕೂ ಆಗಲಿಲ್ಲ.—ಹಾಗೆಯೇ ಯೋಚಿಸಿದೆ.

ಇಡೀ ಭಾರತಕ್ಕೆ ಒಂದು ಭಾಷೆ ಬೇಕು ಎಂದು ದೇಶಕ್ಕೆ ದೇಶವೇ ಬೊಬ್ಬೆ ಇಡುತ್ತಿದೆ. ಕೂಗಿ ಕೂಗಿ ನಾಯಕರ ಗಂಟಲೆಲ್ಲಾ ಗಾರಾಗಿದೆ. ಹಿಂದಿಯನ್ನು ಮುಂದಕ್ಕೆ ತಂದು, ಭಾರತ ಭಾಷೆ ಮಾಡಬೇಕೆ?—ಮಾತೃ ಭಾಷೆ ಮುಂದು ಮಾಡಿ ಇಂಗ್ಲೀಷನ್ನು ಎರಡನೆಯ ಭಾಷೆ ಮಾಡುವುದೇ?—ಅಥವಾ ಸಂಸ್ಕೃತವನ್ನು ಪುನರುಜ್ಜೀವಿಸುವುದೇ? ವಿವಿಧ ಪ್ರಶ್ನೆಗಳು ಹಾರಾಡುತ್ತಿವೆ. ಬಹು ಜನರು ಹಿಂದಿಯನ್ನೇ ಭದ್ರಮಾಡೋಣವೆಂದು ಹೇಳುತ್ತಿರುವರು. ಆದರೆ, ಅವರು ಹಿಂದಿಯನ್ನು ಪ್ರಚಾರಮಾಡಲು ಮಾರ್ಗ ಕಾಣದೆ ತೊಳಲುತ್ತಿರುವರು. ಶಾಲೆಗಳನ್ನಿಟ್ಟರೆ ಓದುಗರು ಬರರು. ಹರಿಕಥೆಗಳನ್ನು ಹಿಂದಿಯಲ್ಲಿ ಮಾಡಿದರೆ, ಚರ್ಪಿನ ಹೊತ್ತಿಗೂ ತಲೆಹಾಕುವುದಿಲ್ಲ. ವ್ಯವಹಾರ ಭಾಷೆ ಮಾಡಲೆತ್ನಿಸಿದರೆ, ಕಪ್ಪೆ ತಕ್ಕಡಿಕೆ ಹಾಕಿದ ಹಾಗಾಗುವುದು. ಒಬ್ಬರು ಒಪ್ಪಿದರೆ, ಇನ್ನೊಬ್ಬರೊಪ್ಪರು. ಆದರೆ ನೋಡಿ, ಯಾವ ಭಾಷೆಯವರೇ ಆಗಲಿ, ಇಸ್ಪೀಟ್ ಕಛೇರಿಗೆ ಕುಳಿತರೆ, ಅರ್ಧ ಮಾತೆಲ್ಲಾ ಹಿಂದಿ, ಅಥವಾ ಹಿಂದೀ ಜೇನಾದದ್ದು. ಕಛೇರಿಗೆ ಕೂತವರಾದರೂ ಆರು ಗಂಟೆ, ಏಳು ಗಂಟೆ ಏಳುವುದೇ ಇಲ್ಲ. ಇಷ್ಟು ಏಕಾಗ್ರತೆಯಿಂದ ಕುಳಿತು ವ್ಯಾಸಂಗಮಾಡುವ ಸನ್ನಿವೇಶ ಇನ್ನು ಯಾವುದರಲ್ಲೂ ದೊರೆಯುವುದಿಲ್ಲ. ಅಲ್ಲದೆ, ಈ ಕೂಟಕ್ಕೆ ಜನರನ್ನು ನಾವೇನೂ ಕರೆದು ಕೂಡಿಸಿ ಮಣೆ ಹಾಕ

ಬೇಕಾಗಿಲ್ಲ. ಅವರವರೇ ಮೇಲೆಬಿದ್ದು ಬರುತ್ತಾರೆ. ದೂರ ದೇಶ, ಹೊತ್ತುಗೊತ್ತು, ಮಳೆ ಮುಂಗಟ್ಟು ಯಾವುದನ್ನೂ ಲೆಕ್ಕಿಸದೆ ನುಗ್ಗಿ ಬರುತ್ತಾರೆ. ಇಡೀ ದೇಶದಲ್ಲೆಲ್ಲೂ ಇದೇ ವಾಡಿಕೆ—ಕಾರಿನಲ್ಲಿ ಬಂದವರು ಕ್ಲಬ್ಬಿನಲ್ಲಿ ಕುಳಿತುಕೊಳ್ಳಬಹುದು, ಬಸ್ಸಿನಲ್ಲಿ ಬಂದವರು ಬರೀ ನೆಲದ ಮೇಲೆ ಕೂರಬಹುದು, ನಡೆದು ಬಂದವರು ಮರದಡಿ ಯಲ್ಲಿ ಸೇರಬಹುದು, ಯಾರು ಹೇಗೆ ಸೇರಿದರೂ ಒಂದೇ ಭಾಷೆಯ ಹೆಚ್ಚು ಉಪಯೋಗ. ಜಾತಿ ಮತದ ಯೋಚನೆಯಿಲ್ಲ. ಕೋಮುವಾರು ಭಾವನೆಯಿಲ್ಲ. ರಾಜಕೀಯದ ಸೋಂಕಿಲ್ಲ.

ಇವೆಲ್ಲವನ್ನೂ ಯೋಚಿಸಿದ ಮೇಲೆ, ನನಗೆ ಅನ್ನಿಸುತ್ತೆ. "ಹಿಂದೀ ಪ್ರಚಾರಕ್ಕೆ ಇಸ್ಪೀಟೇ ಮದ್ದು."

ಇಸ್ಪೀಟ್ ಆಟದಲ್ಲಿ ದೇಶದಾದ್ಯಂತ ಹಿಂದೀ ಪದಗಳನ್ನೇ ಬಳಕೆಗೆ ತರಲಿ. ಇದಕ್ಕೇ ಒಂದು ನಿಘಂಟು ಮಾಡಲಿ, ಇಸ್ಪೀಟ್ ಕಛೇರಿಗಳಿಗೆ ಉತ್ತೇಜನ ಕೊಡಲಿ, ಈ ಸಾರ್ವಜನಿಕ ಭಾಷೆಯನ್ನು ಕಲಿತವರು ಒಂದೊಂದು ಕೂಟದಲ್ಲೂ ಸೇರಲಿ, ಭಾಷಾ ಸೇವೆ ಮಾಡಲಿ. ಸ್ವಾಮಿ ಕಾರ್ಯ ಸ್ವಕಾರ್ಯವೆರಡೂ ಆದಂತಾಗುವುದು. ಹಲವಾರು ತಿಂಗಳಿನಲ್ಲೇ ಪ್ರಚಾರ ಕಾರ್ಯವು ಭರದಿಂದ ಸಾಗುವುದು. ಭಾಷಾಪರಿಜ್ಞಾನವು ಬೆಂಕಿಯಂತೆ ಹರಡುವುದು.

ಸಮರಾಂತ್ಯದ ಹೊತ್ತಿಗಾದರೂ—ಈಗಲೇ ನಾವು ಈ ಕೆಲಸವನ್ನು ಕೈಗೊಂಡರೆ—ಹಿಂದೂಸ್ಥಾನವು ಸಾಕ್ಷಾತ್ತಾಗಿ ಹಿಂದೀಸ್ಥಾನವಾಗಿಯೇ ಆಗುವುದು.

——o——

ಗೋವಧೆಯ ಕಾನೂನು ಬಂದ ಮೇಲೆ, ಮುದಿ ಗೋವುಗಳೆಲ್ಲಾ ಕಾಯ ಕಲ್ಪವನ್ನು ಮಾಡಲಾರಂಭಿಸಿವೆಯಂತೆ.

✤ ✤ ✤

ಕೈಲಾಸಂರವರ ಪುಸ್ತಕಮಾಲೆಯು ಹೊರಬೀಳುವುದಂತೆ.

—ಕ್ಷಾಮಗಾಲದಲ್ಲಿ ಅಗಿಯುಕ್ಕೆ ಅಕ್ಷರಗಳಾದರೂ ಸಿಕ್ಕುವುದಲ್ಲ!

✤ ✤ ✤

# ನನ್ನ ನಾಟಕ

ಕಳೆದ ಹತ್ತು ವರ್ಷಗಳಿಂದಲೂ ನಾನೊಂದು ನಾಟಕ ಬರೆಯುತ್ತಿದ್ದೇನೆ. ನಂಟರ ಅಪಹಾಸ್ಯವನ್ನು ಲೆಕ್ಕಿಸದೆ, ಮನೆಯವರ ಮುನಿಸಿಗೆ ಮನ್ನಣೆ ಕೊಡದೆ, ಸಾಲ ಸೋಲಗಳನ್ನು ಒತ್ತಟ್ಟಿಗಿಟ್ಟು ಮಂದಗತಿಯ ಮಂದಾಕಿನಿಯಂತೆ ನಾನು ನನ್ನ ಲೇಖಣಿಯನ್ನು ಮುನ್ನೂಕುತ್ತಿದ್ದೇನೆ. ಸಂಕ್ರಾಂತಿ ಹಬ್ಬದ ದಿನ ಮೂರನೆಯ ಅಂಕವನ್ನು ಬರೆಯತೊಡಗಿದೆ.

ಮೊದಮೊದಲು ಗೆಳೆಯರನೇಕರು ನನ್ನ ಪ್ರಯತ್ನವನ್ನು ಶ್ಲಾಘಿಸಿ ಆಗಾಗ್ಗೆ ನನ್ನ ಕೋಣೆಯೊಳಕ್ಕೆ ಬಂದು, ಹೊರಗೆ ಮಳೆ ಬೀಳುತ್ತಿದ್ದಾಗ, ನಾನು ಓದಿದ ಹಲವು ತುಂಡು ದೃಶ್ಯಗಳನ್ನು ಹೂಂಗುಟ್ಟುತ್ತ ಕೇಳುತ್ತಿದ್ದರು. ಆ ಮೇಲೆ, ಅವರೆಲ್ಲ ತಲೆ ತಪ್ಪಿಸಿಕೊಂಡು ತಿರುಗಲಾರಂಭಿಸಿದಾರೆ. ಕೆಲವರು ಬೇರೆ ಊರುಗಳಿಗೆ ವರ್ಗಮಾಡಿಸಿಕೊಂಡು ತೆರಳಿದ್ದಾರೆ. ನನ್ನ ಬರವಣಿಗೆಯನ್ನ ತಿದ್ದಿ, ಸರಿಪಡಿಸಿ, ತೊಳಗಿಸಿ, ಬೆಳಗಿಸಿ, ಉತ್ತಮಪಡಿಸಿದಷ್ಟು ನನ್ನ ಮನೆಯವರಿಗೆ ನನ್ನ ಸಾಮರ್ಥ್ಯದ ಮೇಲೆ ಅಪನಂಬಿಕೆ ಅಧಿಕವಾಗುತ್ತಿದೆ. "ಇದೇನು ಪರ್ವತ ಪ್ರಸವವಾಗಿದೆಯಲ್ಲಾ" ಅಂತ ನನ್ನ ಚಿಕ್ಕಪ್ಪ ಹೀಯಾಳಿಸುತ್ತಾರೆ. "ನಿನ್ನದೇನು, ಜೀವನ ನಾಟಕದಷ್ಟು ಉದ್ದವಾಗದೆಯಲ್ಲೋ, ನಿನ್ನ ಜೀವನ ಮುಗಿಯುವಾಗ ನಿನ್ನ ನಾಟಕವೂ ಮುಗಿದೀತು!" ಅಂತ ನನ್ನ ಭಾವನವರು ಗೇಲಿ ಮಾಡುವರು. ಆದರೆ, ನನ್ನ ನಾಟಕದಲ್ಲಿ ಹತ್ತಾರು ವಸಂತಗಳ ಮಧು, ಹತ್ತಾರು ಹೇಮಂತಗಳ ಹಿಮ; ಹಲವಾರು ವರ್ಷಾಕಾಲಗಳ ಪ್ರವಾಹ, ಅಷ್ಟೇ ಶಿಶಿರ ಗ್ರೀಷ್ಮಗಳ ವಿವಿಧ ಪ್ರಕೃತಿ ವಿಲಾಸಗಳು ತುಂಬಿ ತುಳುಕಿ ಪ್ರತಿಯೊಂದು ಪಾತ್ರವನ್ನೂ ಜಾಜ್ವಲ್ಯಮಾನವಾಗಿ ಚಿರಕಾಲ ನಿಲ್ಲಿಸುತ್ತವೆ ಎಂದು ಅವರೇನು ಬಲ್ಲರು?

ನಿಜವಾಗಿಯೂ, ನನ್ನ ನಾಯಿಕೆಯಾದ ಉಷಾ ಈ ಹತ್ತು ವರ್ಷಗಳಲ್ಲಿ ಅತಿಶಯವಾದ ಬದಲಾವಣೆಯನ್ನು ಹೊಂದಿದ್ದಾಳೆ. ಏನೂ ತಿಳಿಯದ ಆ ಹೊಂಬೆಳಕಿನ ಹಸುಗೂಸು ಈಗ ಯಾರು ಏನು ಅಡ್ಡ ಮಾತಾಡಿದರೂ "ಮುಚ್ಚು ಬಾಯಿ ಮೂಢಾ" (ಅಥವಾ ಮೂಢೆ) ಎಂದು ಗದರಿಸುವ ನಡುಹಗಲ ಗಂಡೆದೆಯ ಗಟ್ಟಿಗಾರ್ತಿಯಾಗಿದ್ದಾಳೆ. ಇಷ್ಟಾದರೂ ಹತ್ತು ವರ್ಷದ ಹಿಂದೆ ಅವಳನ್ನು ಮೋಹಿಸಿದ ಪಾಳೇಗಾರ ಪಾನಿ.ರೆಡ್ಡಿಯೇ ಇನ್ನೂ ನನ್ನ ನಾಟಕದ ನಾಯಕನಾಗಿದಾನೆ. ಅವನನ್ನು ನಾಟಕ ರಂಗದಿಂದ ಓಡಿಸಿ ಮತ್ತೊಂದು ಪಾತ್ರವನ್ನು ಸೃಷ್ಟಿಮಾಡುವುದು ಒಳ್ಳೆಯದಲ್ಲವೇ ಎಂದು ನಾನೂ ಉಷೆಯೂ ಅನೇಕ ಸಲ ಯೋಚನೆ ಮಾಡಿದ್ದೇವೆ. ಇನ್ನೂ ಯಾವ ನಿರ್ಧಾರಕ್ಕೂ ಬಂದಿಲ್ಲ. ಇಳಿ ಹಗಲು ಬರುವ ವೇಳೆಗಾದರೂ,

ಬೇರೆ ಪಾತ್ರ ಸೃಷ್ಟಿಯಾದರೆ ಕ್ಷೇಮ.

ಪಾಳೇಗಾರರಿಗೂ, ಉಷಾ ತಂದೆಯಾದ ಸಕಸಾರೆ ಅಂಗಡಿ ನಾಗಣ್ಣನವರಿಗೂ, ಆಗುವ ವಾಗ್ವಾದಗಳೇ ನನ್ನ ನಾಟಕದ ಅತ್ಯಂತ ಸ್ವಾರಸ್ಯವಾದ ದೃಶ್ಯಗಳು. ಆದರೂ, ಅವುಗಳನ್ನು ತೆಗೆದು ಹಾಕಿದರೆ ನಾಟಕಕ್ಕೆ ಕಳೆ ಏರಿ ಬರುತ್ತೆ ಅಂತ ಮಿತ್ರರನೇಕರು ಹೇಳುತ್ತಿದ್ದಾರೆ. ಕಳೆದ ಎರಡು ಮೂರು ವರ್ಷಗಳಿಂದ ಇವರಿಬ್ಬರ ಸಂಭಾಷಣೆಯಲ್ಲಿ, ನನಗೆ ತಿಳಿಯದೆಯೇ, ವಿಪರೀತ ಬಿರುಸು ಬೆರೆತುಬಿಟ್ಟಿದೆ. ಅದನ್ನಾದರೂ ನಾನು ಇಷ್ಟರಲ್ಲೇ ಇಳಿಸುತ್ತೇನೆ.

ನನ್ನ ನಾಟಕದಲ್ಲಿ ಮುಖ್ಯ ಪಾತ್ರ ವಹಿಸಿ ಕಥಾರಚನೆಗೆ ಅಡಿಗಡಿಗೂ ಸಹಾಯ ಮಾಡುವವರು ಒಬ್ಬರು ಶಾಸ್ತ್ರಿಗಳು. ಆವರನ್ನು ಕಂಡರೆ ನನ್ನ ತಾಯಿಗೆ ತುಂಬಾ ಭಕ್ತಿ. ವಿನಾಕಾರಣ ಕೂಡ ಅವರು ಘಳಿಗೆಘಳಿಗೆಗೂ ರಂಗಸ್ಥಳಕ್ಕೆ ನುಗ್ಗಿ ಉತ್ತಮ ವೇದಾಂತದ ಪಂಕ್ತಿ ಲಾಭವನ್ನು ಸಭಿಕರಿಗೆ ಕೊಡುವರು. ಅವರ ಆಗಮನ ನಿರ್ಗಮನಗಳು ನಾಟಕಕ್ಕೆ ಒಂದು ವರ್ಚಸ್ಸು, ಒಂದು ಓಜಸ್ಸು ಒಂದು ತೇಜಸ್ಸು, ಬಂದಿದೆ, ಸಂದಿದೆ, ಕಂದಿದೆ.

ಆದರೆ, ನಾಟಕದ ಕಂಪನಿಯವರೊಬ್ಬರು ನನ್ನ ಶಾಸ್ತ್ರಿಗಳನ್ನು ನೋಡಿದಾಗ "ತಕ್ಷಣ ಇವರನ್ನ ಉಚ್ಚಾಟನೆ ಮಾಡಿ" ಅಂದರು. ಒಳ್ಳೆಯ ಶಾಸ್ತ್ರಿ, ಆಧ್ಯಾತ್ಮಿಕ ಶಾಸ್ತ್ರ ಇವುಗಳ ಸಂಪರ್ಕವೇ ಇಲ್ಲದ ಅನಾಚಾರದ ಅತ್ಯಾಚಾರದ ನಾಟಕಗಳಿಗೆ ಮಾತ್ರ ಜನ ಕಿಕ್ಕಿರಿದು ತುಂಬುತ್ತಾರೆ, ಅಂತ ಅವರು ಒತ್ತಿ ಒತ್ತಿ ಹೇಳಿದರು.

ನಮ್ಮ ತಾಯಿಗೆ ಆ ಶಾಸ್ತ್ರಿ ಅಂದರೆ ಪ್ರಾಣ. ಅವರಿಗೆ ತಿಳಿಯದೆ ನಾನು ಶಾಸ್ತ್ರಿಗಳನ್ನ ತೆಗೆದುಹಾಕುವ ಹಾಗಿಲ್ಲ. ಹತ್ತು ವರ್ಷಗಳಿಂದ ಅವರೇ ನನ್ನ ನಾಟಕವನ್ನು ಒಂದೇ ಸಮನೆ ಕೇಳುತ್ತಾ ನನ್ನನ್ನ ಪ್ರೋತ್ಸಾಹಿಸುತ್ತಿರುವುದು. ಆದರೆ, ಆಕೆಗೆ ಆಗಲೇ ಕಿವಿ ಮಂದವಾಗುತ್ತಿದೆ. ದೃಷ್ಟಿ ಕೂಡ ಅಷ್ಟು ಸ್ಪಷ್ಟವಾಗಿಲ್ಲ.

ಇನ್ನೂ ಎಂಟು ಹತ್ತು ವರ್ಷ ಕಳೆದರೆ, ನಾನು ನನ್ನ ಶಾಸ್ತ್ರಿಗಳನ್ನೇ ಅನಾಮತ್ತಾಗಿ ಎತ್ತಿ ಹಾಕಿಬಿಡಬಹುದು. ಆದರೆ, ಅಷ್ಟು ಹೊತ್ತಿಗೆ, ಉಷಾ ಏನು ಹೇಳುತ್ತಾಳೋ? ಪಾಳೇಗಾರರು ಅದುವರೆಗೂ ಉಳಿಯುತ್ತಾರೋ ಏನೋ? ಉಷಾ ಮದುವೆಯಾಗದೆ ವಿಧವೆಯಾದರೆ? ಬಲ್ಲವರಾರು? ಬರೆಯಿಸುತ್ತಿರುವ ಆ ಬಾದರಾಯಣನೇ ಬಲ್ಲ!

—ಪಾಟಾಳಿ.

# ಹೆಬ್ಬಿಗುಬ್ಬಾಲೆಯಲ್ಲಿನ ವೇಷದ ಆಟ

(ಸ್ವಂತ ಬಾತ್ಮೀದಾರರಿಂದ)

---

**ಈ** ಸಾರಿ ಹೆಬ್ಬಿಗುಬ್ಬಾಲೆಯಲ್ಲಿ ಹುಲಿಯ ವೇಷ ಹಾಕಿದುದು ಬಲು ಪ್ರೇಕ್ಷಣೀಯವಾಗಿತ್ತು. ಉಸ್ತಾದ್ ಬೆಸ್ತೂರಿನ ರಣಧೀರಪ್ಪನು ನರಭಕ್ಷಕ ಹುಲಿಯ ವೇಷವನ್ನು ಹಾಕಿ, ತಲೆಯ ಮೇಲೆ ಕುಣಿದಾಡುತ್ತಿದ್ದ ಕಾಗದದ ತುಂಡು ಗೊಂಚಲಿನವರೆಗೂ ಎಗರಾಡುತ್ತಿದ್ದನು. ಪಡ್ಡೆ ಹುಲಿಯ ವೇಷ ಹಾಕಿದ್ದ, ಅಭಿಮನ್ಯು ಗರುಡಿಯ ಚಿಕ್ಕಣ್ಣಪ್ಪನು ಬಲು ಚಾಲೂಕಾಗಿ ಘರ್ಜಿಸುತ್ತಿದ್ದನು. ಇನ್ನೊಂದು ವಿಶೇಷವೇನೆಂದರೆ, ಸಮಾನ ಸ್ಥಾನಮಾನಗಳನ್ನು ದಕ್ಕಿಸಿಕೊಳ್ಳಲು, ಹೆಣ್ಣು ಹುಲಿಗಳೂ ಕೂಡ ಮರಿಗಳೊಂದಿಗೆ ವೇಷಕಟ್ಟಿ ಆಟ ಆಡಿ, ತಮ್ಮ ಗರುಡಿಯ ಗೌರವವನ್ನು ಕಾಪಾಡಿದರು.

ಇವೆಲ್ಲಕ್ಕಿಂತಲೂ ಮಿಗಿಲಾದ ಆಟದ ಪಂಗಡವು, ನಾಯಕನ ಗರುಡಿಯವರಿಂದ ಹೂಡಲ್ಪಟ್ಟಿತ್ತು. ಗರುಡಿಯ ಉಸ್ತಾದನಾದ ಚರಿತಪ್ಪನು, ಚಿರತೆಯಂತೆ ಮೈಮೇಲೆ ಬೊಟ್ಟುಗಳನ್ನು ತೊಟ್ಟು, ಬಾಲವನ್ನು ಕಟ್ಟಿ, ಕುಣಿದಾಡಲಾರಂಭಿಸಿದನು. ಇವನನ್ನು ಬೇಟೆಯಾಡುವುದೇ ಆಟವಾಯಿತು. ಮೊದಮೊದಲು ಸುತ್ತು ನಿಂತಿದ್ದ ಜನರ ಮೇಲೇ ಹಾರಿ ಒಬ್ಬನ ಟೋಪಿ, ಇನ್ನೊಬ್ಬನ ಕೋಲು, ಮಗುದೊಬ್ಬನ ಛತ್ರಿ ಈ ರೀತಿ ಹಾರಿಸಿದನು. ಅಷ್ಟರಲ್ಲೇ ಎದುರು ಗರುಡಿಯವನೊಬ್ಬನು ನೇರನೆ ಊರ ರಕ್ಷಣಾದಳದ ಕೇಂದ್ರಕ್ಕೆ ತಂತಿ ಸುದ್ದಿಯನ್ನಿತ್ತು ಈ ರೀತಿ ಒಂದು ಹುಚ್ಚು ಚಿರತೆಯು ಊರು ಹಾಳು ಮಾಡುತ್ತಿದೆ ದಯವಿಟ್ಟು ಕೂಡಲೇ ಬಂದು ಶಿಕಾರಿ ಮಾಡಬೇಕು ಎಂದು ಕೇಳಿಕೊಂಡನು. ಕೇಂದ್ರದ ಕಾವಲುಗಾರನು ತಲೆ ಕೆರೆದುಕೊಂಡು ಇದು ನನ್ನಿಂದಾಗದ ಕಾರ್ಯ. ಅಲ್ಲದೆ ನಾನೊಬ್ಬನೇ ಈ ಕೇಂದ್ರ ಕಛೇರಿಯಲ್ಲಿ ಕಾವಲಿರುವವನು, ನಾನೂ ಹೊರಗೆ ಹೋದರೆ ಈ ಕಛೇರಿಯ ಪಾಡೇನು? ನಮ್ಮ ಸಾಹೇಬರಿಗೆ ಈ ಅವೇಳೆ ಹೊತ್ತಿನಲ್ಲಿ ತಂತಿ ಸುದ್ದಿ ಕಳಿಸಿದರೆ ನನ್ನ ಕೆಲಸಕ್ಕೇ ಕಷ್ಟ ಒದಗಬಹುದು ಎಂದು ಯೋಚಿಸಿ ಮೃದು ನಯ ಭಾಷೆಯಲ್ಲಿ ವಿನಯವಾಗಿ ಒಂದು ಕಾಗದ ಬರೆದು ಕಳಿಸಿದನು. ಅಂಚೆಯ ಮೂಲಕ ಸಾಹೇಬರಿಗೆ ಮಾರನೆಯ ದಿನ ಕಾಗದ ಹೋಯಿತು. ಆತನು ಇದನ್ನು ನೋಡಿ ಈ ಚಿರತೆಯ ಆಟದ ಮೇಲುಸ್ತುವಾರಿಯು ಕೋವಿಯುತನಾದ ನನ್ನ ಸ್ನೇಹಿತನಿಗೆ ಸೇರಿದ್ದು ಅವನಿಗೆ ಈ ಕಾಗದವನ್ನು ಕಳುಹಿಸುವುದು ಮೇಲು ಎಂದು, ತನ್ನ ವಿಜ್ಞಾಪನೆಗಳೊಂದಿಗೆ ಆತನಿಗೆ ಕಳಿಸಿದನು.

ಕೋವಿಯುತಧಿಕಾರಿಯು ಈ ಚಿರತೆಯಾಟವನ್ನು ಮುಗಿಸಲು ಮದ್ದು ಪ್ರಯೋಗ ಮಾಡಬೇಕಾದರೆ, ಮದ್ದನ್ನು

ಯಾವ ಲೆಕ್ಕದಲ್ಲಿ ತೆಗೆದುಕೊಳ್ಳಬೇಕು, ಎಂದು ಯೋಚಿಸಹತ್ತಿ ಕಡೆಗೆ ತನ್ನ ನೌಕರನಿಗೆ ಹೇಳಿಕಳುಹಿಸಿ, "ಯಾವ ಸರ್ಕಾರದ ಹುಕುಂ ಪ್ರಕಾರ ಈಮುಷ್ಟನ್ನು ನಾವು ಉಪಯೋಗಿಸಬಹುದು ಕಂಡು ಹಿಡಿ" ಎಂದನು. ನೌಕರನು ಮೂರು ದಿನ ಹುಡುಕಿ ಹುಡುಕಿ ಇದನ್ನು ನಾವು ಉಪಯೋಗಿಸಲು ಆಗುವುದೇ ಇಲ್ಲ. ಇದನ್ನು ಸೈನ್ಯಾಧಿಕಾರಿಗಳೇ ಮಾಡಬೇಕು ಎಂದು ಹೇಳಿದನು. ತಥಾಸ್ತು ಎಂದು ಕೋವಿಯುತಧಿಕಾರಿಯು ತನ್ನ ವಿಜ್ಞಾಪನೆಗಳನ್ನೂ ಸರಿಗೂಡಿಸಿ ಸೈನ್ಯಾಧಿಕಾರಿಗೆ ಕಳಿಸಿದನು.

ಸೈನ್ಯಾಧಿಕಾರಿಯು ಇದನ್ನು ನೋಡಿ ಮಿಾಶೆ ಕೆದರಿಕೊಂಡನು. "ಎಲಎಲಾ, ನರಬೇಟೆ ಆಡುವುದು ನಮ್ಮ ಕೆಲಸ. ಈ ವೇಷಕಟ್ಟಿ ಚಿರತೆ ಆಗಿರುವವನನ್ನು ಬೇಟೆ ಮಾಡುವುದು ನಮ್ಮ ಗೌರವಕ್ಕೆ ಕಡಿಮೆ. ಹೀಗೂ ಮಾಡಬಹುದೆ?" ಎಂದು ಶಿಖಂಡಿಯನ್ನು ಕಂಡು ನಿರಸ್ತ್ರರಾದ ಆಚಾರ್ಯರಂತೆ ತಾನೂ ನಿರಸ್ತ್ರನಾದನು. ಹಾಗೂ ಈ ಕಾಗದವನ್ನು ಮುಂದಕ್ಕೆಲ್ಲಿ ಕಳಿಸುವುದು ಎಂದು ಯೋಚಿಸಲಾರಂಭಿಸಿದನು.

ಈ ವೇಳೆಗೆ ಚಿರತಪ್ಪನ ಕುಣಿದಾಟ ಹಾವಳಿಯನ್ನು ಮಿಕ್ಕ ಗರಡಿ ಹುಡುಗರೆಲ್ಲ ನೋಡಿ ತಡಿ ತಡಿ ಎಂದು, ತಾವೇ ಬೇಟೆಯಾಡಲಾರಂಭಿಸಿದರು. ಒಬ್ಬನು ಸೌದೆಯನ್ನೇ ಆಯುಧ ಮಾಡಿಕೊಂಡನು, ಇನ್ನೊಬ್ಬನು ಗಳುವನ್ನೇ ಎತ್ತಿ ಹಿಡಿದನು. ಮಗುದೊಬ್ಬನು ಖಾಕೀ ಬಟ್ಟೆಯನ್ನುಟ್ಟು ಮುನ್ನುಗ್ಗಿದನು. ಕಲಿಯುಪಾಸಕನೊಬ್ಬನು ಸಮರಗೀತವೊಂದನ್ನು ರಚಿಸಿ ಕರ್ಕಶವಾಗಿ ಹಾಡಿದನು, ಗುಮಾಸ್ತನೊಬ್ಬನು ಸರ್ಕಾರದ ಪ್ರತಿಬಂಧಕಾಜ್ಞೆಯನ್ನು ಗಟ್ಟಿಯಾಗಿ ಓದಿದನು. ಪುರೋಹಿತನೊಬ್ಬನು ಚಿರತಯಜ್ಞಾ ಮಂತ್ರಗಳನ್ನುಚ್ಛರಿಸುತ್ತಾ 'ಚಿರತಾಯ ಸ್ವಾಹಾಃ' ಎಂದು ಘೋಷಿಸಿದನು, ಸವಾನ ಸ್ಥಾನಮಾನಗಳನ್ನು ಗಳಿಸುವ ಹೆಂಗರುಡಿಯವರೇನೂ ಸುಮ್ಮನಿರಲಿಲ್ಲ. ಅವರೂ ಬೇಟೆಗೆ ಆರಂಭಿಸಿದರು. ಕರಾರಿಕಚ್ಚೆಯನ್ನುಟ್ಟ ಒಬ್ಬ ವೀರರಮಣಿಯು ಮುಂದೆ ನುಗ್ಗಿ ನಮ್ಮ ಗುಡಿಸಲಿಗೆ ಬಾ, ನಾನೇ ಅನ್ನ ಮಾಡಿ ಹಾಕುತ್ತೇನೆ ಎಂದು ಹೆದರಿಸಿದಳು. ಮೂರು ಜತೆ ಮಕ್ಕಳ ತಾಯಿಯೊಬ್ಬಳು ಮಕ್ಕಳನ್ನು ಒಟ್ಟಿಗೇ ಕೂಡಿಸಿ ಚಿರತಪ್ಪನಿಗೆ ತೋರಿಸಿ ಬೆದರಿಸಿದಳು. ನವಯುವತಿಯೊಬ್ಬಳು ತೋಳ ಮೇಲೆ ಜೋತುಬಿದ್ದ ಲೋಲಕಾಯುಧವನ್ನೇ ಪ್ರಯೋಗಿಸಿದಳು. ಮಗುದೊಬ್ಬ ಸಾಹಸಿತಿಯು ಹಾರ್ಮೋನಿಯಮನ್ನೇ ಹಿಡಿದು ತಂದಳು. ಸಂಸಾರಿತಿಯು ಕಾದ ಸೌಟನ್ನೂ, ಸೂಲಗಿತ್ತಿಯು ಶೂಲವನ್ನೂ, ಅಣಿ ಮಾಡಿಕೊಂಡರು.

ಚಿರತಪ್ಪನು ಈ ಬೇಟೆ ವ್ಯೂಹವನ್ನು ನೋಡಿ ತನಸ್ಸಕ್ಕೆ ತಾನೇ, "ತನ್ನ ಪ್ರಾಣವ ಬಿಟ್ಟೆನು" ಎಂದು ಗೋವಿನ ಕಥೆಯನ್ನು ನೆನೆಸಿಕೊಂಡು ಮಲಗಿಯೇ ಬಿಟ್ಟನು. ಅವನನ್ನು ನಂತರ ಮೆರವಣಿಗೆಯಲ್ಲಿ ಊರೆಲ್ಲಾ ಸುತ್ತಿಸಿ ಅವನ ಗರುಡಿಯಲ್ಲಿ ಬಿಟ್ಟುಬಿಟ್ಟರು. ಆಟವು ಬಲು ಬಲು ಚೆನ್ನಾಗಿತ್ತು.

ಜನರಿಗೆಲ್ಲಾ ಈ ಆಟವು ಬಲು ರುಚಿಸಿತು. ಆದರೂ, ನಗರ ರಕ್ಷಣಾ ದಳದವರು ಇನ್ನೂ ತಲೆ ಕೆರೆದುಕೊಳ್ಳುತ್ತಲೇ ಇದ್ದಾರೆ. ಅವರ ಕಾಗದ ಇನ್ನೂ ಪರಿಸಮಾಪ್ತಿ ಹೊಂದಲಿಲ್ಲವಲ್ಲಾ ಎಂದು. ಇನ್ನೂ ಲೇಖನಿಗಳನ್ನು ಹರಿತಮಾಡುತ್ತಲೇ ಇದ್ದಾರೆ. ಷಾಯಿ ಕುಡಿಕೆಗಳನ್ನು ಅಣಿಮಾಡುತ್ತಲೇ ಇದ್ದಾರೆ. ಸರ್ಕಾರದ ಹುಕುಮುಗಳನ್ನು ಹುಡುಕುತ್ತಲೇ ಇದ್ದಾರೆ.

ಮುಂದಿನ ವರ್ಷದ ಆಟದ ವೇಳೆಗಾದರೂ ಸಿದ್ಧರಾಗಬಹುದಲ್ಲ!

---

ಲೆಬನಾನಿನಲ್ಲಿ ಪರಿಸ್ಥಿತಿ ಹತೋಟಿಗೆ ಬಂದಿದೆಯಂತೆ.

—ಅಂದರೆ, ಅಲ್ಲಿನ ಸುದ್ದಿಗಳು ಹೊರಕ್ಕೆ ಬಾರದಂತೆ ಏರ್ಪಾಟಾಗಿದೆ.

✤ ✤ ✤

ಇನ್ನು ಮೇಲೆ ಮಂತ್ರಾಕ್ಷತೆಗೆ ಅಕ್ಕಿಯನ್ನು ಉಪಯೋಗಿಸಬಾರದೆಂದೂ, ನೀರನ್ನೇ ಮಂತ್ರಿಸಿ ಉಪಯೋಗಿಸಬೇಕೆಂದೂ, ಶಾಸ್ತ್ರ ರತ್ನರೊಬ್ಬರು ನಮಗೆ ಪತ್ರ ಬರೆದಿದ್ದಾರೆ.

✤ ✤ ✤

ಚೀಣಾ ಜಪಾನ್ ಯುದ್ಧ ಶುರುವಾದಾಗಿನಿಂದ, ಚೀಣಾ ದೇಶವೂ ಒಂದು ದೇಶವೆಂದು ಇತರೆಡೆಗಳಲ್ಲಿ ಅಭಿಪ್ರಾಯವು ಮೂಡಿದೆಯಂತೆ.

—ಅದಕ್ಕೇ ಇನ್ನೂ ಭಾರತವು ಒಂದು ಮನುಷ್ಯರಿರುವ ದೇಶ ಎಂಬುದು ಲೋಕದಲ್ಲಿ ತಿಳಿದುಬಂದಿಲ್ಲ—ಯುದ್ಧ ಇನ್ನೂ ಬಂದಿಲ್ಲವಾದ್ದರಿಂದ.

✤ ✤ ✤

ಅಂಡಮಾನ್ ದ್ವೀಪದಲ್ಲಿ ಸ್ವತಂತ್ರ ಭಾರತದ ಸ್ಥಾಪನೆಯಾಗಿದೆಯಂತೆ.

—ಇದೇನು ಹೊಸದು, ನಮ್ಮಲ್ಲಿ ಕೆಲವರಾಗಲೇ ಅಲ್ಲಿಗೆ ಗಡೀಪಾರಾಗಿ ಇದೇ ಕೆಲಸವನ್ನು ಮಾಡಿದ್ದರಲ್ಲವೇ?

✤ ✤ ✤

# ವಾರ್ಷಿಕೋತ್ಸವ

---

- ೧ -

ಶ್ರೀಮಾನ್ ಸೋಮಪ್ಪನವರಿಗೆ—

ವಿಜ್ಞಾಪನೆಗಳು. ತಮ್ಮ ಪತ್ರ ಕೈಸೇರಿತು. ಆಗಲಿ, 'ಶುಭಸ್ಯ ಶೀಘ್ರಂ' ಆದರೆ, ಕಳೆದ ವರ್ಷ ನನಗಾದ ಅವಮಾನವೊಂದೇ ಸಾಕು. ಈ ಸಲ ಯಾವ ಕೆಲಸವನ್ನೂ ನನಗೆ ಹಚ್ಚಬೇಡಿ. ಫೋಟೋ ತೆಗೆದಾಗ ನನ್ನನ್ನ ನಿಲ್ಲಿಸಿ ಅವನನ್ನ ಹುಲ್ಲಿನ ಮೇಲೆ ಕೂರಿಸಿದ್ದು ಮಹಾಪರಾಧ. ನನ್ನ ತಲೆಯ ಮೇಲಾದರೂ ನಿಲ್ಲಿಸ ಬಹುದಾಗಿತ್ತೇ ಹೊರತು, ಕೂರಿಸಿದ್ದು ತಪ್ಪೇ ಸರಿ! ಈ ಸಲ ಫೋಟೋ ಇಲ್ಲ ತಾನೇ? ಅಲ್ಲದೆ, ಕಳೆದ ವರ್ಷದ ಫೋಟೋ ಪ್ರತಿಯನ್ನ ಗೋಡೆ ಮೇಲಿಂದ ಕೆಳಗಿರಿಸಿ ಮರೆಯಾಗಿಡಿ. ಹಾಗೆ ಮಾಡಿದರೆ, ನಾನು ಅಧ್ಯಕ್ಷನಾಗುವುದಕ್ಕೂ ಸಿದ್ಧ!

ಇತಿ ತಮ್ಮವನೇ ಆದ

ಸು ಬ್ಬ ರಾ ಯ.

ನಿಮ್ಮನ್ನು ಪ್ರಶಂಸೆ ಮಾಡುವಂತೆ ನಾನು ರಾಮಣ್ಣನಿಗೆ ಹೇಳಿ ಅವನ ನ್ನೊಪ್ಪಿಸುತ್ತೇನೆ ಸ್ವತಃ ಪ್ರೇರೇಪಿತನಾದವನಂತೆ ತೋರ್ಪಡಿಸಿಕೊಳ್ಳುತ್ತಾನೆ.

ಸು. ರಾ.

- ೨ -

ಶ್ರೀಮಾನ್ ಸೋಮಪ್ಪನವರಿಗೆ—

ವಿಜ್ಞಾಪನೆಗಳು. ವಾರ್ಷಿಕೋತ್ಸವದ ದಿನ ತಮ್ಮನ್ನು ಸ್ತೋತ್ರಮಾಡ ಬೇಕೆಂದು ಸುಬ್ಬರಾಯರು ಹೇಳಿದ್ದಾರೆ. ನಾನು ಕೇವಲ ಅನಾಗರಿಕ, ಒರಟ, ಎಂಬುದು ತಮಗೆ ಇಷ್ಟರಲ್ಲೇ ತಿಳಿದಿರಬೇಕು. ಅಲ್ಲದೆ, ಬುಡವಿಲ್ಲದ ಹೊಗಳಿಕೆ ಯಿಂದಲೇ ಸಂಘ ಈ ಸ್ಥಿತಿಗೆ ಇಳಿದಿದೆ ಎಂಬುದನ್ನೂ ನಾನು ಬಲ್ಲೆ. ಆದರೂ, ಉಳಿದೆಲ್ಲರಿಗಿಂತಲೂ ನಿಮ್ಮ ಅಂತರ್ಯವನ್ನು ನಾನೇ ಬಲ್ಲವನಾದ್ದರಿಂದ, ಕೈಲಾ ದಷ್ಟು ಮಾಡುತ್ತೇನೆ. ತಂಬೇ ಗೌಡನ ಕೇಸಿನ ವಿಷಯ ಎತ್ತುವುದಿಲ್ಲ, ಧೈರ್ಯ ವಾಗಿರಿ. ನಾಳೆ ನಡೆಯುವ ಸಂಘದ ನಾಟಕಕ್ಕೆ ನಾಲ್ಕು ಟಿಕೇಟು ಕಳುಹಿಸಿ ಕೊಡಿ. ಬೆಳ್ಳೂರು ಪ್ರಕರಣವನ್ನು ಅಷ್ಟು ಒತ್ತಿ ಹೇಳುವುದಿಲ್ಲ. ಸಂಘದ ಕಚೇರಿಯಿಂದ ಹತ್ತು ಹಾಳೆ ಬಿಳೀ ಕಾಗದ ಕಳುಹಿಸಿಕೊಡಿ, ಹುಡುಗರ ಉಪಯೋ ಗಕ್ಕೆ. ಚೆಂಗಿರಿ ಕಥೆಯನ್ನಂತೂ ನಾಲ್ಕು ಮಾತಲ್ಲೇ ತೇಲಿಸಿಬಿಡುತ್ತೇನೆ.

ಚಂದಾ ಹಣ ಶೇಖರವಾಗಿದ್ದರೆ, ಹತ್ತು ರೂಪಾಯಿ ಸಾಲ ಕೊಟ್ಟಿರಿ. ಮುಂದಕ್ಕೆ ಹೇಗೋ ನೋಡಿಕೊಳ್ಳೋಣ. ಆಡಿಟ್ ಹೊತ್ತಿಗೆ, ಮೂರು ರಶೀತಿ ತಯಾರಿಸಿ ಕೊಡುತ್ತೇನೆ.

ಇತಿ ನಿಮ್ಮ ಶ್ರೇಯೋಭಿಲಾಷಿ,
ರಾ ಮ ಣ್ಣ.

- ೩ -

ಶ್ರೀಮಾನ್ ಸೋಮಪ್ಪನವರಿಗೆ—

ವಿಜ್ಞಾಪನೆಗಳು. ಉತ್ಸವ ಎಂಬ ನೆಪದಲ್ಲಾದರೂ ಸಂಘ ಎಚ್ಚೆತ್ತು ಕೊಂಡದ್ದರಲ್ಲಿ ಸಮಾಧಾನ. ಸಂಘ ಚೇತರಿಸಿಕೊಂಡಾಗ ವಾಚನ ಮಾಡಲೆಂದೇ ನಾನು "ಅರಣ್ಯರೋಧನ" ಎಂಬ "ರಾಮಾಯಣ, ಮಹಾಭಾರತ ಮಹಾ ಮಿಶ್ರಕಾವ್ಯ"ವನ್ನು ರಚನೆ ಮಾಡಿದೇನೆ. ಆ ದಿನ ತರುತ್ತೇನೆ. ಮಾನ್ಯ ಬಿರು ದಾಂಕಿತ ಅಧ್ಯಕ್ಷರಿಂದಲೇ ಅದರ ಪ್ರಥಮ ಪಠನೋತ್ಸವ ಜರುಗಲಿ. ಅವರನ್ನ ಆಗಲೇ ಕಂಡಿದ್ದೆ. ಸುಮಾರು ಒಂದು ಒಂದೂವರೆ ಗಂಟೆ ಕಾಲ ಮೀರದೆ ಓದ ಬೇಕೆಂದು ಕಟ್ಟಪ್ಪಣೆ ಕೊಟ್ಟಿದಾರೆ. ತಾವು ನಾಲಿಗೆ ಕೊಟ್ಟಷ್ಟು ನಾನು ಮಾತು ಚಾಚುತ್ತೇನೆ.

ಇತಿ ಅಭಿನವ ವ್ಯಾಸ ವಾಲ್ಮೀಕಿ,
ಮ ಂ ಗ ಪ್ಪ.

- ೪ -

ಶ್ರೀಮಾನ್ ಸೋಮಪ್ಪನವರಿಗೆ—

ವಿಜ್ಞಾಪನೆಗಳು. ಆಹ್ವಾನ ಪತ್ರಿಕೆಯನ್ನು ಓದಿ ನಾಚಿಕೆಯಿಂದ ತಲೆ ತಗ್ಗಿಸಿದೆ. ಅಧ್ಯಕ್ಷರಾಗಿ ಧಮ............ರನ್ನು ಆರಿಸಿ ಕೂರಿಸಿರುವುದು ನನ್ನಂತ ಸ್ಥಳದ ಮಹನೀಯರ ಮುಖಕ್ಕೆ ಮಸಿಯಲ್ಲವೆ? ಅಧ್ಯಕ್ಷ ಪದವಿ ಕೂಡ ಧರ್ಮಕ್ಕೆ ಸಿಗುತ್ತದೆ ಅಂದರೆ ಆಶ್ಚರ್ಯ. ಶ್ರೀಮಾನ್............ಇರಲಿಲ್ಲವೆ? ಶ್ರೀ............ ರಿಗೇನಾಯಿತು? ಯಾರೂ ಇಲ್ಲದಿದ್ದರೆ, ನನ್ನ ಬಾಗಿಲಿಗೆ ಬರಬಾರದಾಗಿತ್ತೆ? ಯಾವ ಹುತ್ತದ ಮೇಲೆ ಯಾವ ಹಾವನ್ನು ಕೂರಿಸುವುದು ಎಂಬ ವಿವೇಚನೆಯೇ ಬೇಡವೆ? ಇರಲಿ, ಚಿಂತೆ ಇಲ್ಲ. ಅಧ್ಯಕ್ಷರ ಪರಿಚಯ ಭಾಷಣವನ್ನು ಮಾಡಲು ನನ್ನನ್ನೇ ಕರೆಯಿರಿ. ಅಷ್ಟಾದರೂ ಅವಕಾಶ ಕೊಡಿ.

ಇತಿ ನಿಮ್ಮ ಸೇವಕ,
ಶಿ ವ ಪ್ಪ.

- ೫ -

ಶ್ರೀಮಾನ್ ಸೋಮಪ್ಪನವರಿಗೆ—

ವಿಜ್ಞಾಪನೆಗಳು. ಲಕ್ವಾ ಹೊಡೆದು ಯಮನ ದವಡೆಯೊಳಗೆ ಅವನ ತುಟಿಯನ್ನೇ ತಲೆದಿಂಬು ಮಾಡಿಕೊಂಡು ಬಿದ್ದಿರುವ ನಾನು ಇದರೊಂದಿಗೆ ಕಳುಹಿ

ಸಿರುವ ಸಂದೇಶವನ್ನು ನನ್ನ ಮೊಮ್ಮಗ ಅಲ್ಲಿ ಅಂದು ಓದುವ ಹಾಗೆ ಏರ್ಪಾಟು ಮಾಡಿ. ನನ್ನ ಚಂದಾ ಬಾಕಿಯನ್ನು ಮುಂದಿನ ಸಲ ಪೆನ್ಷನ್ ಹಣ ತಂದ ಕೂಡಲೇ ಕಳುಹಿಸುತ್ತೇನೆ.

ಇತಿ ನಿಮ್ಮ ಪಕ್ಷಪಾತಿ,

ಲ. ನಾರಾಯಣಯ್ಯ,

- ೬ -

ಶ್ರೀಮಾನ್ ಸೋಮಪ್ಪನವರಿಗೆ—

ವಿಜ್ಞಾಪನೆಗಳು. ನಾಳೆ ವಾರ್ಷಿಕೋತ್ಸವ ಸಮಾರಂಭಕ್ಕೆ ಬರುವಾಗ ಕುಂಠಿತ ನೀಲಕಂಠಶಾಸ್ತ್ರಿಗಳು ತಮ್ಮ "ಒಡ್ಡರಾರಾಧನಂ" ಎಂಬ ಗ್ರಂಥವನ್ನೂ ತರುತ್ತಾರೆ ಎಂಬ ಸಮಾಚಾರ ನನಗೆ ತಿಳಿಯಬಂದಿದೆ. ಅದನ್ನ ನೀವು ಹೇಗಾದರೂ ಮಾಡಿ ಅವರಿಂದ ಕಸಿದುಬಿಡಬೇಕು. ಇಲ್ಲದಿದ್ದರೆ, ಹಲವಾರು ಸಲ ಅದನ್ನು ಕೇಳಿದ ನನ್ನಂತಹ ಪಾಪಿಗಳು ಯಾರಾದರೂ ಆತ ಅದನ್ನು ಅಲ್ಲಿ ಓದಲು ಯತ್ನಿಸಿದಾಗ ಆತನನ್ನು ಖೂನಿ ಮಾಡಿದರೂ ಮಾಡಿಬಿಡಬಹುದು. ಈ ವಿಷಯದಲ್ಲಿ ದಯವಿಟ್ಟು ನಮಗೆ ಇಂದೇ ಭರವಸೆ ಕೊಡಬಲ್ಲಿರಾ?

ಇತಿ ಬಡಪ್ರಾಣಿಗಳ ಪರ,

ಶಾಂತಾರಾಂ

- ೭ -

ಶ್ರೀಮಾನ್ ಸೋಮಪ್ಪನವರಿಗೆ—

ವಿಜ್ಞಾಪನೆಗಳು. ನಾಳೆ ಸಂಘದ ವಾರ್ಷಿಕೋತ್ಸವ ಸಮಾರಂಭಕ್ಕೆ ನೀವು ವಿದ್ವಾನ್ ರಾಮಪ್ಪನವರನ್ನು ಕರೆದಿರುವಹಾಗಿದೆ. ಅವರು ಮೊನ್ನೆ ಕಾಲೇಜ್ ಕಾನ್ಫರೆನ್ಸಿನಲ್ಲಿ "ಜಾಲಿಯ ಮರದಂತೆ" ಎಂಬ ಹಾಡನ್ನು ಅಮಲ್ದಾರರ ಕಡೆ ದುರದುರನೆ ನೋಡುತ್ತಾ ಹಾಡಿದರಂತೆ; ಅಮಲ್ದಾರರೇ ಹೇಳಿದರು ನನಗೆ. ಆ ಮತ್ತು ಅದರ ಹಾಗಿನ ಹಾಡುಗಳನ್ನು ಅವರು ಹೇಳಕೂಡದು. ಅಥವಾ, ಬಾಯಿ ತಪ್ಪಿ ಹೇಳಿದರೂ ಕೂಡ, ಅವರು ಶ್ರೀಮಾನ್............ನವರ ಕಡೆ ತಿರುಗಿಕೊಂಡು ಅವರನ್ನೇ ನೋಡುತ್ತಾ ಹೇಳಬೇಕು. ಇದನ್ನು ಅವರಿಗೆ ಈಗಲೇ ಗೂಢವಾಗಿ ತಿಳಿಸಿರಿ.

ಇತಿ ಧರ್ಮ ಪ್ರಲಾಪ ಇತ್ಯಾದಿ ಬಿರುದಾಂಕಿತ,

.........................ಯ್ಯ.

—ನಾ. ಕ.

———o———

## ಭವಿಷ್ಯತ್ತಿಗಾಗಿ ಉಳಿಸಿರಿ

---

ರೈಲಿಳಿದು ನನ್ನ ಕೊಠಡಿಗೆ ಹೋಗುವ ದಾರಿಯಲ್ಲೇ ಎರಡಾಳೆತ್ತರದಲ್ಲಿ ಒಂದು ಜಾಹೀರಾತು ಬೋರ್ಡು. ಮೊದಲು ಅಲ್ಲಿ ಹಚ್ಚ ಹಸುರಿನ ಹಸುರು ಗಾವಲಿನಲ್ಲಿ ಶುಭ್ರ ಸೀರೆಯನ್ನುಟ್ಟ ನವ ತರುಣಿಯೊಬ್ಬಳು ಗಾಳಿಗೆ ಹಾರುತ್ತಿದ್ದ ಸೀರೆಯ ಸೆರಗನ್ನು ಹಾಗೆಯೇ ಹಿಡಿದು ನೆರಿಗೂಡಿಸುತ್ತ ನನ್ನನ್ನೇ ನೋಡು ತ್ತಿದ್ದಳು. ಅವಳ ಪಾದಗಳ ಹತ್ತಿರ ಸನ್‌ಲೈಟ್ ಸಾಬೂನಿನ ಪೆಟ್ಟಿಗೆಯೊಂದು. ನಾನು ಆಕಡೆ ಹೋದಾಗಲೆಲ್ಲಾ ಅವಳಿಗೊಂದು ಕಿರುನಗೆಯನ್ನು ಬೀರಿ ಮುಂದೆ ಸಾಗುತ್ತಿದ್ದೆ. ಈ ದಿನ ನೋಡಿದರೆ ಅವಳು ಅಲ್ಲಿ ಇಲ್ಲವೇ ಇಲ್ಲ. ಓಹೋ! ಇವಳೂ ಯುದ್ಧಕ್ಕೋ, ಏರ್‌ಕ್ರಾಫ್ಟಿಗೋ ಸೇರಿಬಿಟ್ಟಳು ಎಂದುಕೊಂಡೆ. ಅದೇ ಜಾಗದಲ್ಲಿ ಹಿರಿಯಕ್ಷರಗಳಲ್ಲಿ "ಭವಿಷ್ಯತ್ತಿಗಾಗಿ ಉಳಿಸಿರಿ" ಎಂಬ ಜಾಹೀರಾತು

ಪ್ರಜೆಗಳನ್ನು ಕಂಡರೆ ಅಧಿಕಾರಿಗಳಿಗೆ ಏನು ಪ್ರೇಮ! ನಾವೆಲ್ಲಾದರೂ— ಸಕಲವೂ ಪ್ರಿಯವಾದ ಸಮರಕಾಲದಲ್ಲಿ ಹಣವನ್ನು ದುಂದು ಮಾಡಿ—ಭವಿಷ್ಯತ್ತಿ ನಲ್ಲಿ ತೊಂದರೆ ಪಡುತ್ತೇವೆಂದು ಮನಗಂಡು, ಈ ರೀತಿ ಯೋಗ್ಯವಾದ ಸಲಹೆ ಯನ್ನು ಕೊಡುತ್ತಿರುವರು. ಇದನ್ನಾದರೂ ಅನುಸರಿಸಿ ಇನ್ನು ಮೇಲೆ ಭವಿಷ್ಯತ್ತಿ ಗಾಗಿ ಉಳಿಸೇಬಿಡುತ್ತೇನೆ ಎಂದು ನಿಶ್ಚಯಿಸಿದೆ.

✤ ✤ ✤

ಹೋಟಲಿಗೆ ಹೋದೆ. ಕಾಫಿ, ಇಡಲಿ ಕೊಡಯ್ಯಾ ಎಂದೆ. 'ಚಿಲ್ಲರೆ ಇದೆಯೇ ಸಾರ್', ರೂಪಾಯಿ ಇದೆ ಚಿಲ್ಲರೆ ಇಲ್ಲ. ಹಾಗಾದರೆ, ಇಡಲಿ ಕಾಫಿ ಸಿಗುಲ್ಲ. ಭವಿಷ್ಯತ್ತಿಗಾಗಿ ಮೂರೂವರೆಯಾಣೆ ಉಳಿಸಿದೆ.

✤ ✤ ✤

ಬೆಳಗಿನ ಹೊತ್ತು ಬೇಗ ನನ್ನ ಸ್ನೇಹಿತನ ಮನೆಗೆ ಹೋಗಿ ಅವನನ್ನು ನೋಡಿಕೊಂಡು ಅವನ ಆತಿಥ್ಯವನ್ನು ಸ್ವೀಕರಿಸೋಣ ಎಂದು ಬಸವನಗುಡಿಯ ಕಡೆಗೆ ಹೊರಟೆ. ಜಟಕಾದವನೊಬ್ಬನನ್ನು ಕರೆದು, ಅವನಿಗೆ ಆರಾಣೆ ತೆತ್ತು ಬಸವನಗುಡಿಗೆ ಹೋಗೋಣ ಎಂದು, "ಏನಯ್ಯಾ ಬಾಡಿಗೆ ಬಸವನಗುಡಿಗೆ" ಎಂದೆ. "ಒಂದೂವರೆ ರೂಪಾಯಿ" ಎಂದ, ಕುಳಿತಿದ್ದ ಕಡೆಯಿಂದಲೇ—

ಆರಾಣೆ ಉಳಿಸಿದೆ. ಭವಿಷ್ಯತ್ತಿಗಾಗಿ.

✤ ✤ ✤

ಆ ವೇಳೆಗೆ ಖಾಕೀಧಾರಿಗಳಿಬ್ಬರು ನನ್ನೆದುರಿಗೆ ಹೋಟಲಿಗೆ ಹೋದರು. ಅವರನ್ನು ಹೋಟಲಿನವನು ಚಿಲ್ಲರೆ ಇದೆಯೇ ಎಂದು ಕೇಳಲೇ ಇಲ್ಲ. ಕೇಳಿದರೂ ಅವರೇನೂ ಜವಾಬು ಕೊಡುವವರಂತೆ ಕಾಣಿಸಲಿಲ್ಲ. ಇಡಲಿ ತಿನ್ನುವುದಕ್ಕೇ ಆರಂಭಿಸಿದರು. ಇದನ್ನು ನೋಡಿದ ಕೂಡಲೇ ನನ್ನ ಕೊಠಡಿಗೆ ಹೋದೆ. ಖಾಕೀ ಸ್ಕ್ಯಾಟ್ ಉಡುಪನ್ನು ಹಾಕಿ ಜೋರಾಗಿ ಹೋಟಲಿಗೆ ಹೋದೆ. ಮೂರು ಇಡ್ಲಿ ಎರಡು ದೋಸೆ ಎಂದು ಹಿಂದೂಸ್ಥಾನಿಯಲ್ಲಿ ಕೂಗಿದೆ. ತಿಂದೆ—ಕಾಫಿ ಕುಡಿದೆ, ಇನ್ನೇನು ಎದ್ದು ಹೊರಟು 'ಬಿಲ್ಲು' ಕೊಡಬೇಕು. ಆ ವೇಳೆಗೆ ಹಳೆಯ ಖಾಕಿ ಧಾರಿಗಳು ದೊಡ್ಡ ಜಗಳಕ್ಕೆ ಶುರುಮಾಡಿದ್ದರು. ಗಲ್ಲದ ಮೇಲೆ ಕೂತಿದ್ದ ಮಾಲೀಕನು ಅವರನ್ನು ಸಮಾಧಾನ ಮಾಡಲು ಹೊರಟ. ನಾನೂ ಹೊರಹೊರಟೆ. ನಾನು ಬಂದಿದ್ದು ಹೋದದ್ದೂ ಯಾರಿಗೂ ಬೇಕಿಲ್ಲ.

ಎಂಟಾಣೆ ಉಳಿಸಿದೆ—ಭವಿಷ್ಯತ್ತಿಗಾಗಿ.

❖ ❖ ❖

ಸಾಯಂಕಾಲ ಹಾಗೆಯೇ ಸಿನಿಮಾಗೆ ಹೋಗೋಣ ಎಂದುಕೊಂಡೆ. ಆರು ಗಂಟೆ ಹೊತ್ತಿಗೆ ಹೋದರೆ, ಸಿನಿಮಾ ಹತ್ತಿರ, ಭೂರಿ ದಕ್ಷಿಣೆಗೆ ಸೇರಿದ ಹಾಗೆ ಜನ ಸೇರಿತ್ತು. ಭೂರಿ ದಕ್ಷಿಣೆ ಏನು, ಅಕ್ಕಿ ಡಿಪೋ ಹತ್ತಿರ ಬಡಪಾಯಿಗಳು ಗುಂಪು ಕಟ್ಟಿದ ಹಾಗೆ ಗುಂಪು ಕಟ್ಟಿತ್ತು. ಟಿಕೇಟು ಆಫೀಸಿನ ಮೇಲೆ ಒಂದು ಕೈ ಬರಹದ ಬೋರ್ಡು 'ಎಂಟಾಣೆ ಟಿಕೇಟುಗಳಿಲ್ಲ' ಎಂದು. ಈ ಗುಂಪು ಭೇದಿಸಿಕೊಂಡು ಹೋದರೂ, ಹನ್ನೆರಡು ಆಣೆ ತೆರಬೇಕು. ಇದೆಲ್ಲಿ ಸಾಧ್ಯ! ಎಂದು ಹಿಂತಿರುಗಿದೆ.

ಇನ್ನೂ ಎಂಟಾಣೆ ಉಳಿಸಿದೆ—ಭವಿಷ್ಯತ್ತಿಗಾಗಿ.

❖ ❖ ❖

ಹಾಗೆಯೇ ಅಡ್ಡಾಡಿಕೊಂಡು ಕೊಠಡಿಗೆ ಹಿಂತಿರುಗಿದೆ. ಲೆಕ್ಕ ಹಾಕಿದೆ. ಭವಿಷ್ಯತ್ತಿಗಾಗಿ ಒಂದು ರೂಪಾಯಿ ಒಂಭತ್ತೂವರಾಣೆ ಮಿಗಿಸಿದ್ದೆ. ಇದನ್ನು ನಮ್ಮ ಆಳರಸರಿಗೆ ತಿಳಿಸಿದರೆ ಎಷ್ಟು ಸಂತೋಷಪಟ್ಟುಕೊಳ್ಳುತ್ತಾರೆ. ಅವರ ಹಿತವಾದವನ್ನು ನಾನು ಕೇಳಿದುದಕ್ಕಾಗಿ ಅಭಿನಂದಿಸಿ ನನ್ನ ಹೆಸರನ್ನು ಪತ್ರಿಕೆ ಪತ್ರಿಕೆಗಳಲ್ಲೂ ಪ್ರಕಟಿಸುತ್ತಾರೆ ಎಂದುಕೊಂಡು, ಒಂದು ಕಾಗದ ಬರೆದೆ. ಜೇಬಿಗೆ ಕೈ ಹಾಕಿದೆ—ದುಡ್ಡು ತೆಗೆಯೋಣವೆಂದು. ಇದ್ದ ಎರಡು ರೂಪಾಯಿ ಮಾಯ. ಅಯ್ಯೋ ದೇವರೇ! ಎಲ್ಲಿ ಹೋಯಿತು ಎಂದು ಹುಡುಕಿ ಹುಡುಕಿ ಸುಸ್ತಾದೆ. ಭವಿಷ್ಯತ್ತಿಗಾಗಿ ಉಳಿಸಿದ ಹಣದ ಜತೆಗೆ ನಾಳೆ ಖರ್ಚಿನ ಚಿಲ್ಲರೆಯೂ ಮಾಯ. ಸಿನಿಮಾ ಗಲಾಟೆಯಲ್ಲಿ ಯಾರಾದರೂ ಜೇಬುಗಳ್ಳರು, ಕೈಚಲುಕು ಮಾಡಿದರೋ?

ಹೋಟಲಿನಿಂದ ಹಿಂತಿರುಗವಾಗ ಅವಸರದಲ್ಲಿ ಕರವಸ್ತ್ರವನ್ನು ತೆ ... ರೂಪಾಯಿಗಳೂ ಜಾರಿದವೋ? ಏನ ಪತ್ತೆಯಾಗಲಿಲ್ಲ ಭವಿಷ್ಯ ... ಯಾಯಿತು.

ಹಾಗೆಯೇ ಅಂಗಿಯನ್ನು ತಿರುಗಿ ಹುಡುಕಲಾರಂಭಿಸಿದೆ. ಕಳೆದುಕೊಂಡರೂ ಹುಡುಕುವ ದುರಭ್ಯಾಸದಿಂದ, ಅಂಗಿಯ ಒಳಪದರದೊಳಗೆ ಎಲ್ಲಿಯೋ ಈ ರೂಪಾಯಿಗಳು ಕೈಗೆ ಸಿಕ್ಕಿದವು ಜೇಬಿನಿಂದ ಅಲ್ಲಿಗೆ ಯಾವ ಮಾಯದಲ್ಲಿ ಹೋಯಿತೋ—ಆ ಮಾಯಾರಂಧ್ರವು ಕೈಗೆ ಸಿಗದು ರೂಪಾಯೀನೋ ಒಳ ಪದರದೊಳಕ್ಕೆ ಹೋಗಿ ಸುರಕ್ಷಿತವಾಗಿತ್ತು.

ಇದನ್ನು ತೆಗೆಯುವ ಬದಲು, ಅಲ್ಲೇ ಉಳಿಸಿದೆ ಭವಿಷ್ಯತ್ತಿಗಾಗಿ.

✤ ✤ ✤

—— o ——

ಕಾಲೇಜು ವಿದ್ಯಾರ್ಥಿನಿಯೊಬ್ಬಳು ಹೊಸ ತರಹ ಪ್ಯಾರ್ಷ ಬಳೆಯೊಂದನ್ನು ಹಾಕಿಕೊಂಡಿದ್ದಳಂತೆ.

—ನಚ್ಚಿನ ಹುಡುಗನೊಬ್ಬನು ಅದು ನೋಡಲೆತ್ನಿಸಿದಾಗ ಅದರಲ್ಲಿದ್ದ ಬರವಣಿಗೆಯು ಕಾಣಬಂತು, "ಕೈ ಬಿಡು, ಇವಳು ನನ್ನವಳು, ಶಾಮು."

✤ ✤ ✤

ಮಗು ತಪ್ಪಿಸಿಕೊಂಡಿದೆ. ಮೂರು ವರ್ಷ, ಎಣ್ಣೆಗೆಂಪು. ಹುಡುಕಿಕೊಟ್ಟವರಿಗೆ ಒಂದು ಸೇರು "ನೆಲ್ಲೂರು ಸಣ್ಣ ಬಹುಮಾನ".

(ಜಾಹೀರಾತು.)

✤ ✤ ✤

ಇಬ್ಬರಿರಲೇಬೇಕು ಒಂದು ಮದುವೆಯಾಗಬೇಕಾದರೆ.

—ಭಾವಿಗೆ ಬೀಳುತ್ತೇನೆಂಬ ತಾಯಿ—ನಕ್ಷತ್ರೀಕ ಮಾವ.

✤ ✤ ✤

# ಅಜಗಜ



ಮುನ್ಸಿಪಲ್ ಕೌನ್ಸಿಲರ್ ಮುನಿರತ್ನಂ ಮೊದಲಿಯಾರ‍್ರು ಮುನ್ಸಿಪಲ್ ಎಲ್ಲೆಯನ್ನು ದಾಟಿ ನಿರ್ಭಯವಾಗಿ ತಮ್ಮ ಸಾಯಂಕಾಲದ ಗಾಳಿ ಸವಾರಿಯನ್ನ ಬೆಂಗಳೂರಿನ ದಕ್ಷಿಣ ದಿಕ್ಕಿಗೆ ತಿರುಗಿಸಿದರು. ಮೊದಲಿಯಾರ‍್ರ ದೇಹ ಪ್ರಮಾಣ ಸಾಧಾರಣದ್ದು (ತೂಕ ಆರು ಸ್ಟೋನ್, ಮೂರು ಪೌಂಡು) ದೇಹಕ್ಕನುಗುಣ ವಾಗಿ ಕೈ ಕಾಲುಗಳೂ ತತ್ಪ್ರಮಾಣದಲ್ಲೇ ಇದ್ದು ಅವರ ವಾಕಿಂಗ್ ಬಹಳ ಸಾಧಾ ರಣವಾಗಿ ಸಾಗುತ್ತಿತ್ತು. ಮುನಿರತ್ನಂ ಮೊದಲಿಯಾರ‍್ರು ಮೆಂಟಲ್ ಹಾಸ್ಪಿಟ ಲನ್ನು ಹಾದು, ಹಿಂದೆ ತಿರುಗೋಣವೇ, ಮುಂದೆ ಸಾಗೋಣವೇ ಎಂದು ತರ್ಕಿಸು ತ್ತಿರುವಷ್ಟರಲ್ಲಿ, ಆಸ್ಪತ್ರೆಯ ಕಾಂಪೌಂಡಿನ ಮೇಲೆ ಒಂದು ಮನುಷ್ಯಾಕೃತಿ ಕೆಲವು ಗರಡಿ ಸಾಮುಗಳನ್ನು ಬಹಿರಂಗವಾಗಿ ಅಭ್ಯಸಿಸುತ್ತಿದ್ದುದು ಕ್ರಮೇಣ ಅವರಿಗೆ ಕಂಡು ಬಂತು. ಆ ಪ್ರಾಣಿ ಆಸ್ಪತ್ರೆಯ ಆತಿಥ್ಯದಲ್ಲಿದ್ದ ಮಹಾನುಭಾವರಲ್ಲೊಬ್ಬನೆಂದು ಮೊದಲಿಯಾರ‍್ರ ಕುಶಾಗ್ರ ಬುದ್ಧಿಗೆ ತಿಳಿಯದಿರಲಿಲ್ಲ. ಆತ ಅಭ್ಯಾಸಿಸುತ್ತಿದ್ದ "ಡಿಲಕ್ಸ್" ಸಾಮುಗಳ ಅಮಾನುಷತೆಯಲ್ಲಿ ತಲ್ಲೀನರಾಗಿದ್ದ ಮೊದಲಿಯಾರ‍್ರು ಆತನ ಗಾತ್ರವನ್ನು ಹಾಗೇ ಅವಲೋಕಿಸಿದರು. ಎತ್ತರ ಸುಮಾರು ಆರೂವರೆ ಅಡಿ, ಗಾತ್ರ ಸುತ್ತಳತೆಗಳು ತಮ್ಮ ಹತ್ತಿಪ್ಪತ್ತರಷ್ಟು ಇದ್ದು ಆತ ಅವರಿಗೆ ಒಂದು ಮರಿಕಿಂಗ್‌ಕಾಂಗಿನಂತೆ ತೋರಿದ್ದು ಆಶ್ಚರ್ಯವೇನಲ್ಲ.

ಇದ್ದಕ್ಕಿದ್ದಂತೆ ಕಿಂಗ್‌ಕಾಂಗಿಗೆ ತನ್ನ ಸಾಹಸ ಕಾರ್ಯಗಳಲ್ಲಿ ಬೇಸರ ಹುಟ್ಟಿ, ಕಾಂಪೌಂಡಿನ ಮೇಲೆ ತೆಪ್ಪಗೆ ನಿಂತು, ಹಾಗೇ ಸುತ್ತ ತಿರುಗಿ ಮೊದಲಿಯಾರ‍್ರ ಕಡೆ ಒಮ್ಮೆ ನೋಡಿದ. ಮೊದಲಿಯಾರ‍್ರು ಮೊದಲು ಮಂಕುಹಿಡಿದಂತೆ ಸ್ತಂಭಿತರಾಗಿ ಒಂದು ಕ್ಷಣ ಸುಮ್ಮನೆ ನಿಂತರು. ಆ ಮೇಲೆ ಅವರ ಕೈಕಾಲುಗಳು ಬಲವಾಗಿ ಅದುರಲಾರಂಭಿಸಿ, ಮೊಂಡಿಗಳು ಗುದ್ದಾಡಲಾರಂಭಿಸಿದವು. ತಮಗರಿವಿಲ್ಲದೆಯೇ ಅವರು ನಿಧಾನವಾಗಿ ಬೆಂಗಳೂರಿನಿಂದಾಚೆಗೆ ಹೆಜ್ಜೆ ಹಾಕಲಾರಂಭಿಸಿದರು. ದೃಷ್ಟಿ ಮಾತ್ರ ಕಿಂಗ್‌ಕಾಂಗಿನ ಮೇಲೇ ನೆಟ್ಟಿತ್ತು. ಅವರು ಹೀಗೇ ಹತ್ತು ಹೆಜ್ಜೆ ನಡೆ ಯುವುದರೊಳಗೆ ಅವರ ಕಾಲ್ಕೆಳಗಿನ ಭೂಮಿ ಗುಡುಗಿತು. ಕಿಂಗ್‌ಕಾಂಗ್ ಗೋಡೆಯಿಂದ ಕೆಳಗೆ ಧುಮುಕಿ ತಮ್ಮ ಕಡೆಗೆ ನಡೆಯುತ್ತಿದ್ದ; ಅವನ ಮುಷ್ಟಿಗಳು ಬಿಗಿದಿದ್ದವು; ನಡಿಗೆಯಲ್ಲಿ ಹಠ ಕಾಣಬರುತ್ತಿತ್ತು!

ಮೊದಲಿಯಾರ‍್ರು ಡಬ್ಬಲ್ ಮಾರ್ಚ್ ಮೊದಲಾದ ಸ್ಕೂಲು ಡ್ರಿಲ್ಲಿನ ಎಲ್ಲಾ ಯುಕ್ತಿಗಳನ್ನೂ ಅವಲಂಭಿಸಿ ಕಡೆಗೆ ಒಂದೇ ಉಸಿರಿಗೆ ನಾಗಾಲೋಟ ಕಿತ್ತಿದರು. ಪಳನಿ ಆಂಡವನಿಗೆ ಮನಸ್ಸಿನಲ್ಲಿ ಹರಕೆ ಹೊತ್ತರು. ಒಂದು ಮೈಲಿ ಓಡಹತ್ತಿದ ಮೇಲೆ ಹಿಂತಿರುಗಿ ನೋಡಿದರೆ,—ಕಿಂಗ್‌ಕಾಂಗು ತಮ್ಮ ಹಿಂದೆ ಧಡಧಡನೆ

ಓಡಿಯೇ ಬರುತ್ತಿದ್ದುದು ಕಾಣಿಸಿತು. ಮೊದಲಿಯಾರ್ರು ಓಟಿವನ್ನ ಮುಂದರಿಸಿ ಕಾಲು ದಾರಿ ಕೈ ದಾರಿ ಎಲ್ಲವನ್ನೂ ಹಾಡು ನಾಗಾಲೋಟ ಓಡಿ ಬೇಸತ್ತು ಒಂದು ಕಡೆ ಮುಗ್ಗರಿಸಿ ಬಿದ್ದರು. ಹಿಂದೆ ಎರಡೇ ಗಜ ದೂರದಲ್ಲಿ ಬಿಸಿಯುಸಿರುಬಿಡುತ್ತ ಕಣ್ಣುಗಳನ್ನು ಕೆಂಪಗೆ ಮಾಡಿಕೊಂಡು ಕಿಂಗ್‌ಕಾಂಗು ತನ್ನ ಕಡೆಗೇ ಹಾಯುತ್ತಿದ್ದ. ಅವರಿಗೆ ಇದ್ದಕ್ಕಿದ್ದ ಹಾಗೆ ತಮ್ಮ ಹೆಂಡತಿ ಮತ್ತು ಮಕ್ಕಳು (13) ನೆನಪಾಗಿ, ವಿಶ್ವಯತ್ನಮಾಡಿ ಮೇಲೆದ್ದು ಮುಂದೆ ನೆಗೆದರು! ಆದರೆ,—ಕಿಂಗ್ ಕಾಂಗ್ ಅವರಿಗಿಂತ ಒಂದು ಹೆಜ್ಜೆ ಮುಂದೆ ನೆಗೆದು ಬಂದು ಅವರ ಹೆಗಲಿನ ಮೇಲೆ ಮೆತ್ತಗೆ ಅಂಗೈಯಿಂದ ಬಡಿದು ಚಪ್ಪರಿಸಿ,

"ಔಟ್! ಆಗೋಯ್ತಪ್ಪ!!...............ಈಗ ನನ್ನನ್ನ ಹಿಡಿ, ಜೂಟ್!" ಅನ್ನುತ್ತಾ ಆಸ್ಪತ್ರೆಯ ದಿಕ್ಕಿಗೆ ಓಡಿದ!

—ಎಸ್. ಎನ್. ಶಿವಸ್ವಾಮಿ.

—o—



"ಬಾಳ ಚೆನ್ನಾಗದೆ ಸ್ವಾಮಿ, ಹಲ್ಪುಡಿ............ತಗೊಳ್ರಿ, ಇರ್ಲಿ, ನೋಡಿ, ತಿಗ್ಣೆ ಸಾಯ್ಸೋಕೆ ಉಪ್ಯೋಗ್ಸಬಹ್ದು............"

# ನವೀನ ಗಾದೆಗಳು
## (ಇಸ್ಪೀಟಿನದು)

---

ಎಲೆ ಹಾಕೋ ಗುಂಡ ಎಂದರೆ, ಇಳಿದೋರು ಎಷ್ಟು ಜನ ಎನ್ನೋದೆ.

* * *

ಡೈಮಂಡ್ ಮೇಲೆ ಡೈಮಂಡ್ ಬಿದ್ದರೆ, ತುರುಫ್ ಆಟೇನಿಗೇನು.

* * *

ಹೋದ ಆಟಕ್ಕೆ ಮರುಗಬೇಡ, ಕಳಕೊಂಡನಂತರ ಕೊರಗಬೇಡ.

* * *

ಗುಲಾಮನ ಆಟ ಅಂದರೆ, ಗುಲಾಮ ರಾಜನಿಗಿಂತಲೂ ಒಂದು ಕೈ ಮೇಲು.

* * *

ಇಸ್ಪೀಟ್ ಕಛೇರಿಗಳಲ್ಲಿ ನೋಡಿ ಆಟಕ್ಕೆ ತಕ್ಕ ಬಹಿರೂಪ.

* * *

ಜತೆ ಇದ್ದರೇ ಬಲ ಉಂಟು—ಸಂಘೇ ಶಕ್ತಿ ಕಲೌಯುಗೇ.

* * *

ಆಟ ಆಡುವವನಿಗಿಂತ ನೋಟ ನೋಡೋನು ಕುಣಿಯೋದೇ ಚೆನ್ನ.

* * *

ಕಛೇರೀಗೆ ಎಂದು ಕೂತರೆ ಹೊತ್ತೇನು ಗೊತ್ತು, ಹಿಂಚೇನು ಮುಂಚು.

* * *

ಹೊತ್ತಲ್ಲದ ಹೊತ್ತಲ್ಲಿ ತುರುಫನಿಳಿದೇ ಬಿಟ್ಟ.

* * *

ಮೂರು ಲೋಕದೊಳಗೆಲ್ಲಾ ಮೂರೆಲೆ ಆಟ ಚೆನ್ನ

—o—

# ಮಂಕು ತಿಮ್ಮನ ಕಗ್ಗ

(ಸಂಪಾದಕ—ಡಿ. ವಿ. ಜಿ.)

---

ನೆಲವೊಂದೆ ಹೊಲಗದ್ದೆ ತೋಟ ಮರಳೆರೆ ಬೇರೆ
ಜಲವೊಂದೆ ಸಿಹಿಯುಪ್ಪು ಜವುಗೂಟೆ ಬೇರೆ
ಕಲೆಯೊಂದೆ ಸರ್ವಜ್ಞ ವೇಮನ್ನ ಬೇರೆ
ತಲೆಬಾಗಿ ಪೇಳ್ದವನೆ ಮಂಕು ತಿಮ್ಮ.

ಒಮ್ಮೆ ಹೂದೋಟದಲಿ ಒಮ್ಮೆ ಕೆಳೆಕೂಟದಲಿ
ಒಮ್ಮೆ ಸಂಗೀತದಲಿ ಒಮ್ಮೆ ಶಾಸ್ತ್ರದಲಿ
ಒಮ್ಮೆ ಸಂಸಾರದಲಿ ಮತ್ತೊಮ್ಮೆ ಮೌನದಲಿ
ಬ್ರಹ್ಮಾನುಭವವ ತೋರಿಪನು ಮಂಕು ತಿಮ್ಮ.

ಹುಲ್ಲಾಗು ಬೆಟ್ಟದಡಿ ಮನೆಗೆ ಮಲ್ಲಿಗೆಯಾಗು
ಕಲ್ಲಾಗು ಕಷ್ಟಗಳ ಮಳೆಯು ವಿಧಿ ಸುರಿಯೆ
ಎಲ್ಲರೊಳಗೊಂದಾಗು ಎನುತ ಬೋಧಿಪನಿವನು
ಬಲ್ಲವರಿಗೆಲ್ಲ ಗುರು ಮಂಕು ತಿಮ್ಮ.

ಎಲ್ಲರಿಗೂ ತಿಳಿಯುವಂತೆ, ವಿಧಿವಿಲಾಸವನ್ನೂ, ಬೀದಿಯ ಹಗರಣ ತತ್ವವನ್ನೂ, ತಿಳಿಮಾತುಗಳಲ್ಲಿ ತಿಳಿಸುವ ಗ್ರಂಥವೆಂದರೆ ಈ ಕಗ್ಗ. ಉಪಮಾನಗಳನ್ನು ಆಯ್ದಿರುವುದಾದರೂ, ಗೀತೆ, ಗಾಯಿಟಿಗಳಿಂದ, ಜಟ್ಕಾ ಕುದುರೆಗಳಿಂದ—ಶಾಶ್ವತದ ಅಶ್ವತ್ಥದಿಂದ—ನಶ್ವರದ ಮಣ್ಣು ಕುಡಿಕೆಗಳಿಂದ—ಪ್ರಾಚೀನ ಸಂಶೋಧಕರಿಂದ—ಗ್ರೀಸಿನಲಿ ಮೆರೆವಿರ್ದ ವಿಭೂತಿಗಳಿಂದ—ಬದುಕಿನ ಮೂಲೆ ಮೂಲೆಗಳಿಂದ. ಅನುಭವವೊಂದನ್ನಾಗಲೀ, ಓದಿದುದನ್ನಾಗಲೀ, ಯೋಚಿಸಿ ಮನನ ಮಾಡಿದುದಾಗಲೀ—ಯಾವೊಂದನ್ನೂ ಬಿಡಿ ಮಾತುಗಳಲ್ಲಿ ಹೆಣೆದು, ಸಕಲರಿಗೂ ಎದೆ ಹೊಗುವಂತೆ ಇರುವ ಪದ್ಯಮಾಲೆ.

ಕಡೆಗೆ ಕೊರವಂಜಿಯ ಉದಾತ್ತಧ್ಯೇಯವನ್ನೂ ಬಿಟ್ಟಿಲ್ಲ ನೋಡಿ,

"ನಗುವು ಸಹಜದ ಧರ್ಮ ನಗಿಸುವುದು ಪರಧರ್ಮ
ನಗುವು ಕೇಳುತ ನಗುವು ದತಿಶಯದ ಧರ್ಮ
ನಗುವ ನಗಿಸುವ ನಗಿಸಿ ನಗುತ ಬಾಳುವ ವರವ
ಮಿಗೆ ನೀನು ಬೇಡಿ ಕೊಳೊ ಮಂಕು ತಿಮ್ಮ"

ವಿಚಾರ ವೈಶಾಲ್ಯಕ್ಕೆ ಬೇರೆ ನಿದರ್ಶನ ಬೇಕೆ—ಅಂದಮೇಲೆ ನೀವು ಕಗ್ಗವನ್ನು ಓದಲೇ ಬೇಕು. ಓದದಿದ್ದರೆ, ಖಂಡಿತವಾಗಿಯೂ ಮಂಕು ತಿಮ್ಮನಾಗುವಿರಿ.

---

# ಹುಟ್ಟಿಸಿದ ದೇವರು

ಹುಲ್ಲು. ಮೇಯಿಸಿಯೇ ಮೇಯಿಸ್ತಾನಂತೆ. ಕಲ್ಲಿನಲ್ಲಿರುವ ಕಪ್ಪೆಗೂ, ನೀರಿನಲ್ಲಿರುವ ಮೀನಿಗೂ, ಆಕಾಶದಲ್ಲಿನ ವಿಮಾನಕ್ಕೂ ಕೂಡ ದೇವರು ಆಹಾರ ಕೊಟ್ಟೇಕೊಡುತ್ತಾನಂತೆ. ಇದು ಮೊದ ಮೊದಲು ನನಗೆ ಅಷ್ಟಾಗಿ ಮಂದಟ್ಟಾಗಲಿಲ್ಲ. ಆದರೆ, ನನ್ನ ಸ್ನೇಹಿತ ಗುಂಡನ ಜೀವ ವೈಖರಿಯನ್ನು ನೋಡಿದ ಮೇಲೆ ಹೌದು ಹೌದು ಎನ್ನುವಂತಾಯಿತು. ಬೆಂಚು ಸವೆಯುವ ತನಕ ಶಾಲೆಯಲ್ಲಿ ಕುಳಿತು, ವಯಸ್ಸಾಯಿತಲ್ಲಾ ಎಂದು ಶಾಲೆಯನ್ನು ಬಿಟ್ಟ ಗುಂಡು, ವಸಂತ ಋತುವಿನಲ್ಲಿ ಮಾವಿನ ತೋಪು, ವರ್ಷಋತುವಿನಲ್ಲಿ ಬಾಳೇ ತೋಟ, ಹೀಗೆ ಸುತ್ತಾಡುತ್ತಿದ್ದನೇ ಹೊರತು ಜೀವನೋಪಾಯಕ್ಕೆ ಏನೊಂದೂ ಮಾಡಲೂ ಇಲ್ಲ. ಮಾಡುವಂತೂ ಇರಲಿಲ್ಲ. ಅವನ ತಂದೆ ರೇಗಿ ರೇಗಿ ಬೀಳುತ್ತಿದ್ದರು. "ನಿಮ್ಮ ಚಿಕ್ಕಪ್ಪನನ್ನು ಹೋತುಕೊಂಡಿದಾನೆ ಸೋಮಾರಿ, ಮುಠ್ಠಾಳ" ಎಂದು ಹೆಂಡತಿಯನ್ನು ಬಯ್ಯುತ್ತಿದ್ದರು. ಅವನ ತಾಯಿಯು "ಯಾಕೆ ಬಯ್ಯಬೇಕೋ ಎಳೆಯ ಹುಡುಗ, ನಿಮಗಿಂತಲೂ ಚೆನ್ನಾಗಿ ಸಂಪಾದಿಸಿಯೇ ಸಂಪಾದಿಸುತ್ತಾನೆ." ಎಂದನ್ನುತ್ತಿದ್ದರು.

ಒಂದು ದಿನ ಹೊಸ ಚಲನಚಿತ್ರವೊಂದನ್ನು ನೋಡಲು ಗುಂಡು ಅಣಿಮಾಡಿಕೊಂಡ. ಅದೇ ಅವನ ಪರ್ವ ದಿನ. ಯಥಾಪ್ರಕಾರ ಅಮ್ಮನಿಗೆ ಕಾಣದ ಹಾಗೆ, ಅಮ್ಮನ ಖಜಾನೆಯಾದ ಮೆಣಸಿನ ಪುಡಿ ಡಬ್ಬದಿಂದ ನಾಲ್ಕಾಣೆ ಸಂಪಾದಿಸಿದ. ಚಿತ್ರ ಮಂದಿರಕ್ಕೆ ಹೋದ. ಗಲಾಟೆಯೋ ಗಲಾಟೆ. ಗುಂಡ ಹಾಗೂ ಹೀಗೂ ಟಿಕೇಟ್ ಕಿಟಕಿಯ ಹತ್ತಿರವೇ ಕಂಬಿ ಹಿಡಿದು ನಿಂತಿದ್ದ. ಒಂದು ಕಾಲು ಗಾಳಿಯಲ್ಲಿ, ಇನ್ನೊಂದು ಕಾಲು ಇನ್ನೊಬ್ಬರ ಕಾಲು ಮೇಲೆ. ಸುತ್ತಲೂ ಬೆವರು ಸುರಿಸುತ್ತಾ ನೂಕುನುಗ್ಗುತ್ತಿದ್ದ ಜನ ಸಂದಣಿ. ಟಿಕೆಟ್ ಕಿಟಕಿಯ ಬಾಗಿಲು ತೆರೆಯಿತು. ಅಷ್ಟರಲ್ಲೇ ಯಾವನೋ ಒಬ್ಬ ಕುಳ್ಳ ಗೂಳಿಯ ಹಾಗಿದ್ದವನು, ಗೂಳಿಯ ಹಾಗೆಯೇ ನುಗ್ಗಿದ. ಆ ರಭಸಕ್ಕೆ ಜನರು ಚದರಿದರು. ಕುಳ್ಳ ನೆಟ್ಟಗೆ ಕಿಟಕಿಯ ಕಡೆಗೆ ನುಗ್ಗಿದ. ಆ ಗಲಾಟೆಯಲ್ಲಿ ಅರೆಗಾಳಿಯಲ್ಲಿ ತೇಲಾಡುತ್ತಿದ್ದ ಗುಂಡ ಕಂಬಿ ಕಳಚಿ ಗುಂಪಿನ ಹೊರಕ್ಕೆ ಬಂದೇಬಿಟ್ಟ.

ಗುಂಡನಿಗೆ ಕೋಪ ಎಂದರೆ ಕೋಪ. ಎಲ! ಎಲಾ! ನಾನು ಅಷ್ಟು ಹೊತ್ತು ಕಾಯ್ಕೊಂಡು ನಿಂತಿದ್ದರೂ, ಈ ಕುಳ್ಳ ನುಗ್ಗಿ ಬಂದು ಟಿಕೆಟ್ ಕೊಂಡನಲ್ಲಾ ಎಂದು ಕೋಪ, ಹಾಗೂ ಆಶ್ಚರ್ಯ. ಅಷ್ಟರಲ್ಲೇ ಆ ಕುಳ್ಳ ಕೈಲಿ ಎಂಟು ನಾಲ್ಕಾಣೆ ಟಿಕೇಟ್ ತೆಗೆದುಕೊಂಡು ಹೊರಕ್ಕೆ ಬಂದು ಐದಾಣೆ ಟಿಕೇಟ್ ಎಂದು

ಕೂಗಲಾರಂಭಿಸಿದ. ಗುಂಪಿನಲ್ಲಿ ನುಗ್ಗಲು ಕೈ ಮನಸ್ಸಾಗದ ಸೆಣಕಲ ಸ್ಯಾಂಡೋ ಗಳು ಐದೈದಾಣೆ ಕೊಟ್ಟು ಟಿಕೇಟು ತೆಗೆದುಕೊಂಡರು. ನೆಗುವಿನ ಪತ್ರಿಕೆ ಮಾರಿದ ಹಾಗೆ ಈ ಟಿಕೇಟುಗಳನ್ನು ಮಾರಿದ ಕುಳ್ಳ ಎಂಟಾಣೆ ನಫೆಯನ್ನು ಚಡ್ಡಿ ಜೇಬಿಗೆ ಹಾಗಿ ಸುಮ್ಮನಾದನೇ? ಇಲ್ಲ. ತಿರುಗಿ ಗೋಡೇ ಅಂಚಿನಿಂದ ಒಮ್ಮೆ ನುಗ್ಗಿ ತಿರುಗಿ ಎಂಟು ಟಿಕೇಟು ತಂದು ಹೊರಗೆ ಲಾಭಕ್ಕೆ ಮಾರಿದ ಇನ್ನೊಮ್ಮೆ ಜನರ ಕಾಲು ನಡುವೆ ನುಗ್ಗಿ ಮುಂದೆ ಸಾಗಿ ಇನ್ನಷ್ಟು ಟಿಕೇಟ್ ತಂದ. ತಿರುಗಿ ಎಂಟಾಣೆ ಲಾಭ ಸಂಪಾದಿಸಿದ.

ಆ ಸಾಯಂಕಾಲ ಚಿತ್ರ ಶುರುವಾಗುವ ಹೊತ್ತಿಗೆ ಮೂರು ರೂಪಾಯಿ ಸಂಪಾದಿಸಿದ.

ಗುಂಡ ಇದೆಲ್ಲವನ್ನೂ ನೋಡಿದ. ಗುಂಪು ಕಡಿಮೆಯಾದ ಮೇಲೆ ಜೀವ ರೊರಿಸಿಕೊಳ್ಳುತ್ತ. ಆ ಕುಳ್ಳನ ಹತ್ತಿರ ಹೋಗಿ “ನಿಮ್ಮ ಚಾಲೂಕು ನೋಡಿದೆ, ನನಗೂ ಇದರ ಮರ್ಮ ಹೇಳಿಕೊಡಿ ಇಬ್ಬರೂ ಈ ಕೆಲಸ ಮಾಡೋಣ, ಎಂಟೆಂ ಟಾಣೆ ಹಂಚಿಕೊಳ್ಳೋಣ ಎಂದ. ಕುಳ್ಳ ಗುಂಡನನ್ನು ನೋಡಿದ. ಮಾವಿನ ಕಾಯಿ, ನೆಲ್ಲಿಕಾಯಿ, ಬಾಳೇಹಣ್ಣಿನಿಂದ ಬೆಳೆಸಿ ಬಿಗುವಾಗಿದ್ದ ದೇಹವನ್ನು ನೋಡಿದ. “ಆಗಲಿ, ನಾಳೆಯಿಂದ ನೀವೂ ನಾವೂ ಒಟ್ಟು ಕೂಡಿ ಈ ಕೆಲಸ ಮಾಡೋಣ. ಯಾರಾದರೂ ಒಮ್ಮೊಮ್ಮೆ ನನ್ನ ಮೇಲೆ ಜಗಳಕ್ಕೆ ಬರಬಹುದು, ಆಗ ನೀವು ಸಹಾಯಕ್ಕಿದ್ದರೆ ನನಗೂ ಒಳ್ಳೆಯದು” ಎಂದು ಹೇಳಿದ. ಮಾರನೆಯ ದಿನದಿಂದ ಗುಂಡನಿಗೂ ಒಂದೆರಡು ರೂಪಾಯಿಗಳು ಸಂಪಾದನೆ.

ಈಗ ಗುಂಡನ ತಂದೆಗೆ ಮಗನಲ್ಲಿ ಗೌರವ. ತಾನು ಆರು ಗಂಟೆ ಕಛೇರಿ ಯಲ್ಲಿ ದಿಟವಾಗಿಯೂ ಒದೆದಾಡಿಸಿಕೊಂಡರೆ ಮೂವತ್ತು ರೂಪಾಯಿ ಸಂಪಾದನೆ. ಮಗನು ಸಾಯಂಕಾಲ ಕೇವಲ ಒಂದು ಗಂಟೆ ವ್ಯಾಯಾಮ ಮಾಡಿ ಅದೇ ಮೂವತ್ತು ರೂಪಾಯಿ ಸಂಪಾದನೆ. ಅಲ್ಲದೆ ಮನೆಗೆ ಜೇರೆ ಅದನ್ನೆಲ್ಲಾ ತಂದು ಕೊಡುತ್ತಾನೆ. ಮರ್ಯಾದೆ ಇಲ್ಲವೇ?

“ನಾನು ಆಗಲೇ ಹೇಳಲಿಲ್ಲವೇ” ಎಂದು ಅವನ ತಾಯಿ ಈಗಲೂ ಗಂಡ ನನ್ನು ಮೂದಲಿಸುತ್ತಾಳೆ.

—“ಮರಿ ಪುಟ್ಟು”

——o——

# ಅನರ್ಥಕೋಶ — ಇ

ಇ—ಸ್ಕೂಲ ಸ್ಪೀಚು, ಸ್ಟೇಷನ, ಸ್ಟ್ರೈಕು ಮುಂತಾದ ಪದಗಳನ್ನು ಕನ್ನಡಿಸುವಾಗ ಈ ಶಬ್ದವನ್ನು ಸೇರಿಸಬೇಕೆಂಬುದು ಭಾಷಾ ಶಾಸ್ತ್ರ ರೀತ್ಯಾ ಧರ್ಮವೆನಿಸಿದೆ.

ಇಟ್ಟಿಗೆ—ಪೂರ್ವದಲ್ಲಿ ಎದುರು ಪಕ್ಷದವರ ಊಟ ಕಾಲದಲ್ಲಿ ಇದರ ಪುಡಿಯನ್ನು ತಿಕ್ಕುತ್ತಿದ್ದರು.

ಇಡ್ಲಿ—ತಮಿಳು ಸಂಸ್ಕೃತಿಯ ಅಡಿಗಲ್ಲು.

ಇಮಾಂಸಾಬಿ—ಈತನಿಗೂ ಗೋಕುಲಾಷ್ಟಮಿಗೂ ಯಾವ ಸಂಬಂಧವೂ ಇಲ್ಲ.

ಇಲ್ಲ—"ಬಿಚ್ಚಿಟ್ಟದ್ದು ಪರರಿಗೆ" ಎಂಬ ಸರ್ವಜ್ಞೋಕ್ತಿಯನ್ನನುಸರಿಸಿ, ಪರೋಪಕಾರಾರ್ಥವಾಗಿ ಶ್ರೀಮಂತರು ಸದಾ ಜಪಿಸುತ್ತಿರುವ ಮೂಲ ಮಂತ್ರ.

ಇಲಿ—ಬೆಕ್ಕುಗಳ ಸೇವೆಗಾಗಿಯೇ ಸೃಷ್ಟಿಯಾಗಿರುವ ಪ್ರಾಣಿ. ಬೆಕ್ಕುಗಳನ್ನು ದೂಷಿಸುವುದು ಇಲಿಗಳ ಸಮುದಾಯದಲ್ಲಿ ಕಾನೂನಿಗೆ ವಿರೋಧ.

ಇಶ್ಶಿ—ಶಿಶುಸಾಹಿತ್ಯದ ಶಬ್ದವಿಶೇಷ.

ಇಸಂ—ಚಾಳಿ, ಚಳುವಳಿ ಅಥವಾ, ಚಾಳಿ ಪೀಡಿತ ವ್ಯಕ್ತಿ, ಅಥವಾ ಚಳುವಳಿಕಾರ.

ಇಸ್ಪೀಟು—ಬೇರೆ ಯಾವ ವಿಧದಲ್ಲೂ ಕಾಲಹರಣ ಮಾಡಲರಿಯದವರು ಇದನ್ನೇ ಪಟ್ಟಾಗಿ ಹಿಡಿದು ಕೂತಿರುತ್ತಾರೆ.

ಇಂಕಿ—ಪತ್ರ ಬರೆಯಲು ಶಕುಂತಲೆ ಕಾಡಿಗೆಯನ್ನುಪಯೋಗಿಸಿದಳು. ಈಗಿನ ಕಾಡಿಗೆ ರಹಿತರು ಇದನ್ನೇ ಉಪಯೋಗಿಸುತ್ತಾರೆ.

ಇಂಗ್ಲೀಷು—ಆಂಗ್ರೇಜಿ ಎಂಬುದರ ತದ್ಭವ. ಜೀಕಾರಾಂತವು ಬಹುಮಾನ ಸೂಚಕವಾದ್ದರಿಂದ, ಅನೇಕರು ತದ್ಭವವನ್ನೇ ಬಳಸುತ್ತಿದಾರೆ.

ಇಂಥ—ಇಂಥಿಂಥಾ ಎಂಬುದರ ರೂಪಾಂತರ.

—ಖಾರಾಂಶ.

—o—

# ತಳಪಾಯ ತೆಗೆಸಿದ್ದು

ಶನಿವಾರ ಸಾಯಂಕಾಲ ಶ್ರೀರಂಗಪಟ್ಟಣದಿಂದ ನನ್ನ ಸ್ನೇಹಿತ ಶಾಮುವು ಬರುತ್ತೇನೆಂದು ಕಾಗದ ಬರೆದಿದ್ದ. ನಾವಿಬ್ಬರೂ ಗೋಲಿಯಾಟದ ಸ್ನೇಹಿತರು. ಅವನು ವಿದ್ಯಾರ್ಜನೆಯಾದ ಮೇಲೆ ತನ್ನೂರಾದ ಶ್ರೀರಂಗಪಟ್ಟಣಕ್ಕೆ ಹೋಗಿ ಜಮೀನುದಾರನಾಗಿಬಿಟ್ಟ. ನಾನು ಷಹರಿನಲ್ಲಿಯೇ ಉಳಿದುಕೊಂಡು ಜೀವನೋಪಾಯವನ್ನು ಅಪಾಯವಾಗಿಯೇ ನಡಿಸುತ್ತಿದ್ದೆ. ಅಂದರೆ, ಬೆಂಕಿಪೊಟ್ಟಣ ವ್ಯಾಪಾರಮಾಡುತ್ತಾ ನಡೆಸುತ್ತಿದ್ದೆ—ಅದೂ ಒಂದು ತೆರನಾಗಿ ಮಂಡಿ ವ್ಯಾಪಾರ ಮಾಡುತ್ತಿದ್ದೆ. ಅಂಗಡಿ ಬಾಡಿಗೆ ತಿಂಗಳಿಗೆ ಎರಡು ರೂಪಾಯಿ, ನೂರು ರೂಪಾಯಿ ಸಾಮಾನು, ತುಂಬಿದ್ದೆ. ಅಂದ ಮೇಲೆ ಮಂಡಿ ಮೇಲೆಯೇ ಕುಳಿತು ವ್ಯಾಪಾರ ಮಾಡುತ್ತಿದ್ದೆ. ಏನೋ ಯುದ್ಧ ಶುರುವಾಯಿತು ಅಂದರು, ಬೆಂಕಿಪೊಟ್ಟಣದ ಬೆಲೆ ಎರಡು ಕಾಸಿನಿಂದ ಒಂಭತ್ತು ಕಾಸು ಅಂದರು. ನನ್ನಲ್ಲಿದ್ದ ಬೆಂಕಿಪೊಟ್ಟಣವೆಲ್ಲಾ ಮಾರಿ ಸುಮಾರು ಇನ್ನೂರು ರೂಪಾಯಿ ಲಾಭ ಸಂಪಾದಿಸಿದೆ. ನನ್ನಿಂದ ಸುತ್ತಮುತ್ತಲಿನ ಹಳ್ಳಿಯವರು ಆಗಾಗ್ಗೆ ಬೆಂಕಿಪೊಟ್ಟಣ ಕೊಳ್ಳುತ್ತಿದ್ದರು. ಅವರ ಹಳ್ಳಿಗೆಲ್ಲಾ ಹೋಗಿ ಅವರಿಗಿನ್ನೂ ಇದು ತಿಳಿಯುವುದಕ್ಕೆ ಮೊದಲೇ, ಇದ್ದ ಬದ್ದ ರೂಪಾಯಿಗೆಲ್ಲಾ ಬೆಂಕಿಪೊಟ್ಟಣ ಮೂರು ಕಾಸಿನ ಹಾಗೆ ಕೊಂಡು ತಂದೆ. ಹತ್ತು ಕಾಸಿಗೆ ಕಾಣದ ಹಾಗೆ ಮಾರಲಾರಂಭಿಸಿದೆ. ಆ ವೇಳೆಗೆ ಒಂದು ದಿನ ಯಾರೋ ಬಂದು ಬಾಳೆಯ ಹಣ್ಣು ಎಷ್ಟಿವೆ, ಹೇಗೆ ಎಂದ. ನನ್ನ ಹತ್ತಿರ ಒಂದು ಗೊನೆ ಸುಮಾರು ೧೫೦ ಹಣ್ಣಿದ್ದಿರಬಹುದು. ಇಪ್ಪತ್ತೈದು ಅದರಲ್ಲಿ ಮುಪ್ಪು. ಆಣೆಗೆರಡು ಎಂದು ಹೇಳಿದೆ. ಬಂದ ಭೂಪ ಅಷ್ಟನ್ನೂ ಕೊಂಡುಕೊಂಡು ದಿನಾಗಲೂ ನಾನೆಷ್ಟು ಸರಬರಾಜು ಮಾಡುವುದಕ್ಕಾಗುತ್ತೆ ಎಂದು ಕೇಳಿದ. ಸುಮಾರು ನೂರು ಎಂದೆ. ತೆಗೊ ಮುಂಗಡ ಹಣ ಎಂದು ಕೈಲಿ ಹತ್ತು ರೂಪಾಯಿಟ್ಟ. ಸರಿ, ಅಂದೇ ಎಲ್ಲಾ ದೇವಸ್ಥಾನದ ಅರ್ಚಕರನ್ನೂ ಭೆಟ್ಟಿಯಾಗಿ ಅವರುಗಳ ಹತ್ತಿರ ಒಂದು ಒಪ್ಪಂದಕ್ಕೆ ಬಂದೆ. ದಿನಾಗಲೂ ಅವರುಗಳು ದೇವಸ್ಥಾನಗಳಲ್ಲಿ ಬಂದ ನೈವೇದ್ಯದ ಬಾಳೆಯ ಹಣ್ಣುಗಳನ್ನು ನನಗೆ ಕೊಡುವುದು. ನಾನದನ್ನು ಒಟ್ಟೊಟ್ಟಿಗೆ ಮಾರುವುದು. ಹೀಗೆ ಮಾಡಿ ಒಂದು ವರುಷದಲ್ಲಿ, ಒಂದು ಮನೆಯನ್ನು ಕಟ್ಟಿಸುವಂತಾದೆ. ತಳಪಾಯ ಅಗಿಯುವ ವೇಳೆಗೆ ಶಾಮುವನ್ನು ಬರಹೇಳಿದ್ದೆ. ಅವನೂ ತನಗೆ ತೋಚಿದ್ದನ್ನು ಹೇಳಿ ಮನೆಯನ್ನು ಚೆನ್ನು ಮಾಡೋಣ ಎಂದು. ಶಾಮು ಬಂದ ರೈಲು, ಪ್ಲಾಟ್‌ಫಾರಮ್ಮಿನ ಹತ್ತಿರವೇ ಕವಲೊಡೆದು, ಕೆಲವು ಗಾಡಿಗಳು ಒಂದು ಹಾದಿಯಲ್ಲೂ, ಇನ್ನು ಕೆಲವು ಪಕ್ಕದ ಹಾದಿಯಲ್ಲೂ ನಿಂತುವು. ಶ್ರೀರಂಗಪಟ್ಟಣದ ಗಾಡಿಯೂ ಕೂಡ ನಮ್ಮೂರಿನಲ್ಲಿಯೂ ಕವಲೊಡೆಯಬೇಕೆ, ಎಂದುಕೊಳ್ಳುವಷ್ಟರಲ್ಲಿ ಶಾಮುವು ರೈಲಿನಿಂದಿಳಿದ. ಹಳೆಯ ಸ್ನೇಹಿತ,

ಆ ಮಾತು ಈ ಮಾತು ಆಡುತ್ತಾ, ನಮ್ಮ ಬಾಡಿಗೆ ಮನೆಗೆ ಕರೆತಂದೆ. ಊಟ ಮಾಡಿ ಆ ರಾತ್ರಿಯೆಲ್ಲಾ ಹುಟ್ಟು ಮೊದಲುಗೊಂಡು ಹಿಟ್ಲರನ ತನಕ ಎಲ್ಲಾ ವಿಚಾರವನ್ನೂ ಮಾತನಾಡುತ್ತಾ, ಮಲಗಿದೆವು.

ಬೆಳಗಾಗುತ್ತಲೂ ಕಾಫಿ ತಿಂಡಿ ತಿಂದು ನೆಟ್ಟಗೆ ನನ್ನ ಹೊಸ ಮನೆಯ ಕಡೆಗೆ ಹೋದೆವು. ಅಲ್ಲಿ ತಳಪಾಯಕ್ಕಾಗಿ ಎರಡು ಅಡಿ ತೆಗೆದಿದ್ದರು. ಅಗೆದ ಮಣ್ಣನ್ನು ಮಧ್ಯೆ ಮಧ್ಯೆ ಗೋಪುರ ಕಟ್ಟಿದ್ದರು. ಶಾಮುವು ಇದು ನಿನ್ನದೋ ಇದು ಹೆಂಗಸರದೋ, ಇದು ಮಕ್ಕಳದೋ ಎಂದು ಕೇಳುತ್ತಿದ್ದ. ನಾನೂ ಕೂಡ ಅವನು ಕೊಠಡಿಗಳನ್ನು ಕೇಳುತ್ತಾನೇನೋ ಎಂದುಕೊಂಡು ಹೂ ಹೂ ಎಂದನ್ನುತ್ತಿದ್ದೆ. ಕಡೆಗೆ ಒಂದು ಕಲ್ಲಿನ ಮೇಲೆ ಕುಳಿತ, ನಾನೂ ಕುಳಿತೆ. "ನಿನ್ನದೇನಾದರೂ ಸಲಹೆ ಇದೆಯೇ" ಎಂದೆ. "ಇಲ್ಲದೆ ಉಂಟೆ, ಅದೇ ಯೋಚಿಸುತ್ತಿದ್ದೆ" ಎಂದ. ಏನು ಎಂದು ಕೇಳಿದ ಮೇಲೆ, "ನೋಡು, ನೀನು ಕೋಪಿಸಿಕೊಳ್ಳಬೇಡ. ಮಲಗುವ ಮನೆಯ ಹತ್ತಿರ ದೇವರನ್ನು ಕೂಡಿಸಿದ್ದಿ. ದೇವರ ಪಕ್ಕದಲ್ಲೇ ಅಡಿಗೆ ಮನೆ ಹಾಕಿದ್ದಿ. ಆ ಕಡೆ ಅಡಿಗೆ, ಈ ಕಡೆ ನಿನ್ನ ಗೊರಕೆ, ಪಾಪ ಆ ದೇವರಾದರೂ ಹೇಗೆ ಶಾಂತನಾಗಿರಲು ಸಾಧ್ಯ, ಇದೆಲ್ಲಾ ಚೆನ್ನಲ್ಲ. ಇದನ್ನು ಈಗ ಮಾರ್ಪಡಿಸಲೂ ಆಗುವುದಿಲ್ಲ. ಮೊದಲೇ ನನ್ನ ಕೇಳಬಾರದಾಗಿತ್ತೆ. ಗೋರಿ ಕಟ್ಟಿದ ಹಾಗೆ ಇದನ್ನು ಆ ಕಡೆ ಈಕಡೆ ತೋಡಿಸಿ ಮಧ್ಯ ಮಣ್ಣುಗುಪ್ಪೆ ಹಾಕಿದ ಮೇಲೆ ಏಕೆ ಕರೆಸಿದೆ" ಎಂದ.

ಹಾಗೆಯೇ ನೋಡಿದೆ. ದಿಟ ಅವನು ಹೇಳಿದ್ದು. ಶ್ರೀರಂಗಪಟ್ಟಣದವನು ಅವನಿಗೆ ಈ ಉಪಮಾನ ತೋರಿದ್ದು ನ್ಯಾಯವಾದದ್ದೇ. ಒಂದು ಶಾಲು ಮಣ್ಣು ಗುಪ್ಪೆ ಮೇಲೆ ಹೊದಿಸಿ, ಆ ಕಡೆ ಈ ಕಡೆ ನವಿಲುಗರಿ ಇಟ್ಟಂತೆ ಊಹಿಸಿದರೆ, ಇದು ನನ್ನದು, ಅದು ಆಕೆಯದು ಎನ್ನುವಂತೆಯೇ ಇತ್ತು. ಈಗ ಮಾರ್ಪಡಿಸುವುದಾದರೂ ಹೇಗೆ. ಹೋಗಲಿ ಬಿಡಯ್ಯಾ, ಇದು ಹೇಗೊ ಕಟ್ಟಿ ಮುಗಿಸುತ್ತೇನೆ. ಮುಂದಕ್ಕೆ ನೋಡಿಕೊಳ್ಳೋಣ ಎಂದೆ. ಅಪಶಕುನದ ಮಾತಿನಿಂದ ಖಿನ್ನ ಮನಸ್ಕನಾಗಿ ಅವನೊಡನೆ ಹಿಂತಿರುಗಿದೆ.

ಮನೆ ಮಾತನ್ನೆತ್ತಲೇ ಇಲ್ಲ. ಶಾಮು ಹಿಂದಿರುಗಿ ಹೋಗುವ ತನಕ— ಹಾಗೂ ಹೀಗೂ ಮನೆಯನ್ನು ಕಟ್ಟಿ ಮುಗಿಸಿದೆ. ಗೃಹ ಪ್ರವೇಶ ಇನ್ನೇನು ಮಾಡಬೇಕು, ಆಗ ಒಬ್ಬ ಪಂಜಾಬೀಯವನು "ಸೈನ್ಯದ ಸರಪರಾಜಿನ ದಳ್ಳಾಳಿ" ಮನೆಯ ಹತ್ತಿರ ಬಂದ. ಬಾಡಿಗೆಗೆ ಸಿಗುತ್ತದೆಯೇ ಎಂದ. ಇಲ್ಲ, ಮಾರಾಟಕ್ಕಿದೆ ಎಂದು ಕುಚೋದ್ಯಕ್ಕಂದೆ. ಎಷ್ಟು ಎಂದ. ಹದಿನೈದು ಸಾವಿರ ಎಂದೆ. ನನಗಾಗಲೇ ಐದು ಸಾವಿರ ಖರ್ಚಾಗಿತ್ತು. ಅವನೇನೋ ಈ ಕಡೆ ಆ ಕಡೆ ಅಳೆದ, ಹಾಗೆಯೇ ಕೂಡೋ ಲೆಕ್ಕ, ಗುಣಿಸೊ ಲೆಕ್ಕ ಮಾಡಿದ. ಕಡೆಗೆ ಉತ್ತರ ಕೊಟ್ಟ. ಆಗಲೀ ನಾನು ಕೊಂಡುಕೊಳ್ಳುತ್ತೇನೆ. ನಮ್ಮ ಉಗ್ರಾಣಕ್ಕೆ ಬೇಕು

ಎಂದ. ಹಿಂದೆ ಮುಂದೆ ಬಿಡದೆ ಮೂರೇ ದಿನಗಳಲ್ಲಿ ಅವನಿಗೆ ಮಾರಿಯೇ ಬಿಟ್ಟೆ. ಈಗ ಹದಿನೈದು ಸಾವಿರ ಬ್ಯಾಂಕಿನಲ್ಲಿಟ್ಟಿದ್ದೇನೆ. ಶಾಮುವಿಗೆ ತಂತಿ ಕಳುಹಿಸಿದ್ದೇನೆ. ಆದಷ್ಟು ಬೇಗ ಬಾ, ಇಬ್ಬರೂ ಕೂಡಿ ಒಂದು ಮನೆ ಕಟ್ಟಿಸೋಣ ಎಂದು.

ಶುದ್ಧ ಸ್ನೇಹಿತ ಅಪಶಕುನ ಆಡಿದರೂ ಒಳ್ಳೆಯದೇ ಅಲ್ಲವೇ?

——o——

ಒಳ್ಳೆ ದೆಸೆ ಬಂದರೆ ತಡೆದುಕೊಳ್ಳುವುದು ಕಷ್ಟ.

—ಹೌದು, ಇನ್ನೊಬ್ಬರಿಗೆ ಬಂದರೆ.

✣ ✣ ✣

ಬೇಕು ಬೇಕಾದಾಗ ಹೆಚ್ಚು ಹೆಚ್ಚು ಸಾರಿ, ಕಡಿಮೆ ಕಡಿಮೆ ಮಾಡುವುದು.

(ರೇಷನಿಂಗಿನ ವಿವರಣೆ)

✣ ✣ ✣

ಶತ್ರು ಕೈದಿಗಳ ಶಿಬಿರದಲ್ಲಿ ಪೋಲಾದ ರೊಟ್ಟಿಗಳನ್ನು ಗೊಬ್ಬರಕ್ಕಾಗಿ ಉಪಯೋಗಿಸುತ್ತಿದ್ದಾರೆಂದು ಆಪಾದನೆ.

—ಪೋಲಾಗದೆ ತಿಂದ ರೊಟ್ಟಿಗಳ ಪಾಡೂ ಅಷ್ಟೇ ಅಲ್ಲವೇ?

✣ ✣ ✣

ಚೀಣಿ ಪಡೆಯು ಬರ್ಮಾವನ್ನು ಹೊಕ್ಕಿತು.—ಸುದ್ದಿ.

—ಬ್ರಿಟಿಷರ ಬರ್ಮ ಪುನರಾಕ್ರಮಣದ ಮೊದಲ ಪ್ರಯತ್ನ.

✣ ✣ ✣

ಕರೆನ್ಸಿ ನೋಟುಗಳಿಗೆ ಬದಲಾಗಿ ಹಪ್ಪಳಗಳನ್ನು ಸರಕಾರದವರು ಚಲಾಯಿಸಬೇಕೆಂದಿದ್ದಾರೆಂಬುದು ಶುದ್ಧ ಸುಳ್ಳು.

—ಹಪ್ಪಳಕ್ಕಾಗುವಷ್ಟು ಆಹಾರ ಸಾಮಗ್ರಿಗಳೂ ಇಲ್ಲ.

✣ ✣ ✣

# ಪಾತಮ್ಮನವರ ಬುದ್ಧಿ

ಈ ಊರಿಗೆ ವರ್ಗವಾದಾಗ ನಮ್ಮ ಯಜಮಾನರು ಇಲ್ಲಿಯ ಕ್ಲಬ್ಬಿಗೆ ಮೆಂಬರಾದರು; ನಾನೂ ಈ ಊರು ಸಮಾಜಕ್ಕೆ ಸೇರಿಕೊಂಡೆ. ನೂರೈವತ್ತು ರೂಪಾಯಿ ಸಂಬಳದವರ ಸಹಧರ್ಮಿಣಿಯರೆಲ್ಲ ಸಮಾಜಕ್ಕೆ ಮೆಂಬರುಗಳು, ಸ್ಕೂಲ್ ಮೇಷ್ಟರುಗಳ ಸಂಸಾರ ಬಿಟ್ಟು! ಶ್ರೀಮತಿ ಪಾತಮ್ಮ ಮುನಿರಾಜಯ್ಯನವರೇ ನಮ್ಮ ಸಮಾಜದ ಅಧ್ಯಕ್ಷಿಣಿ. ಅವಳೋ ಅವಳ ಲಕ್ಷಣವೋ! ಅವಳಿಗೆ ನಮ್ಮನ್ನೆಲ್ಲಾ ಕಂಡರೆ ಅಲಕ್ಷ್ಯ. ಡಿಪ್ಟಿ ಕಮಿಷನರ್ ಹೆಂಡತಿ ಹಿಂದೇನೆ ಓಡಾಡುತ್ತಾಳೆ; ಆಕೆ ಕಾರಿನ ಬಾಗಿಲು ತೆರೆಯುತ್ತಾಳೆ, ಆಕೆ ವಜ್ರದ ಬೆಂಡೋಲೆ ಬೆಲೆ ವಿಚಾರಿಸುತ್ತಾಳೆ; ಆಕೆ ಸೀರೆಯನ್ನು ಕಣ್ಣುಮುಚ್ಚಿಕೊಂಡು ಹೊಗಳುತ್ತಾಳೆ; ಆಕೆ ಮಕ್ಕಳನ್ನ ಅಟ್ಟಕ್ಕೇರಿಸುತಾಳೆ; ಆಕೆಯ ಪ್ರತಿಯೊಂದು ಮಾತಿಗೂ ಬಿದ್ದುಬಿದ್ದು ನಗುತ್ತಾಳೆ. ನಮ್ಮನ್ನೇನು ಆಕೆ ಹತ್ತಿರ ಸುಳಿಯುವುದಕ್ಕೇ ಬಿಡುತ್ತಿರಲಿಲ್ಲ.

ಸ್ವರ್ಗದಲ್ಲಿ ಮುಸುರೆ ತಿಕ್ಕುವುದಕ್ಕಿಂತ ನರಕದಲ್ಲಿ ನಾಯಕಿಯಾಗಿರುವುದೇ ಮೇಲು ಅಂತ ನನಗೆ ಅನ್ನಿಸಿತು. ಡಿಪ್ಟಿ ಕಮಿಷನರ್ ಹೆಂಡತಿ ಎದುರು ಕುಂಕುಮದ ಭರಣಿ ಹಿಡಿಯುವುದಕ್ಕೂ ಕೂಡ ನನಗೆ ಯೋಗ್ಯತೆ ಇಲ್ಲ ಅಂತ ಆಕೆ ನನ್ನನ್ನ ದೂಡಿದ ಮೇಲೆ ನನ್ನ ಜನ್ಮ ಹಾಳು ಜನ್ಮವಲ್ಲವೆ, ಹೇಳಿ ನೀವೇನೆ! ಇನ್ನು ನಾವು ಹೆಂಗಸಾಗಿ ಹುಟ್ಟಿ, ಸೀರೆ ಉಟ್ಟು, ಬಳೆ ತೊಟ್ಟು, ತವರು ಮನೆ ತೊರೆದು, ಕಂಡವರ ಮನೆ ಸೇರಿದ್ದೆಲ್ಲ ವ್ಯರ್ಥ ತಾನೆ? ಪಾತಮ್ಮನವರ ಗಂಡನಿಗೆ ಗ್ರೇಡ್ ಸಿಗಬೇಕಾದರೆ, ಆಕೆ ಇನ್ನೇನಾದರೂ ಮಾಡಲಿ! ಆಫೀಸ್ ಕೆಲಸವನ್ನ ಚೆನ್ನಾಗಿ ಮಾಡುವಂತೆ ಗಂಡನಿಗೆ ಹೇಳಿಕೊಡಲಿ. ಹೀಗಲ್ಲ ಹೀಗೆ ಅಂತ ತಿದ್ದಲಿ, ಕಿವಿ ಹಿಂಡಲಿ! ಅದು ಬಿಟ್ಟು, ಸಮಾಜದ ಬಾಗಿಲಲ್ಲಿ ಅಡ್ಡವಾಗಿ ನಿಂತು "ಹೌದಮ್ಮ, ಹೌದಮ್ಮ" ಅಂತ ಓಡಾಡಿದರೆ, ಮಾನವೂ ಇಲ್ಲ, ಮಹಿಳಾರ್ಥವೂ ಇಲ್ಲ!

ಆಕೆ ಗಂಡನ ಯೋಗ್ಯತೆ ಕಸಕ್ಕಿಂತ ಕಡಿಮೆಯಂತೆ, ನಮ್ಮವರು ಹೇಳಿದರು. ಕ್ಲಬ್ಬಿನಲ್ಲಿ ಮುನಿರಾಜಯ್ಯ ಅಂದರೆ, ಮೂರು ಹೊತ್ತೂ ಎಲ್ಲರೂ ಮೂತಿ ತಿವಿಯುವರಂತೆ. ಇಸ್ಪೀಟಿನಲ್ಲಿ ಆತ ಬಲು ಮೋಸಗಾರನಂತೆ; ಎಲೆಗಳನ್ನು ಕದಿಯುವುದು, ಇಣಿಕಿ ನೋಡುವುದು, ಸುಳ್ಳು ಹೇಳುವುದು, ಜಗಳ ಆಡುವುದು ಇದರಲ್ಲೆಲ್ಲ ಪ್ರವೀಣನಂತೆ. ಆತನಿಗೆ ಇನ್ನೂ ಏನೇನೋ ಅಭ್ಯಾಸಗಳಿವೆಯಂತೆ. ಮನೆ ಬಾಡಿಗೆ ಕೊಟ್ಟು ಐದು ತಿಂಗಳಾಯಿತಂತೆ. ಹುಡುಗರಿಗೆ ಟ್ಯೂಷನ್ ಹೇಳುವ ಮೇಷ್ಟರಿಗೆ ನಾಲ್ಕು ತಿಂಗಳಿಂದ ಸಂಬಳವೇ ಇಲ್ಲವಂತೆ; ಹೋದ ತಿಂಗಳು ಬೆಳ್ಳಿಬಟ್ಟಲೊಂದನ್ನು ಅಡವಿಟ್ಟನಂತೆ—ಎಲ್ಲ ನಮ್ಮವರು ಹೇಳಿದರು. ಅವರಿಗೆ ಗೊತ್ತಿದೆ, ಆತನ ಬಂಡವಾಳ.

ನಿನ್ನೆ ಸಮಾಜದಲ್ಲಿ ಸರಸ್ವತೀ ಪೂಜೆ ಆದಾಗ ನಾನು ಏನೂ ತಿಳಿಯದವಳ ಹಾಗೆ, "ಪಾತಮ್ಮನವರೇ! ನಿಮ್ಮ ಮನೆಯಿಂದ ಬೆಳ್ಳಿಬಟ್ಟಲು ತರಿಸಿ" ಅಂದೆ.... ಆಕೆ ಮುಖದಲ್ಲಿ ಏನೂ ಬದಲಾವಣೆಯಾಗಲಿಲ್ಲ. ಅಡವಿಡುವುದೆಂದರೆ ಅಭ್ಯಾಸ ಚೆನ್ನಾಗಿ ಆಗಿದೆ ಅಂತ ಕಾಣುತ್ತೆ.

ಮುನಿರಾಜಯ್ಯನವರು ಒಂದು ಸಲ ನಮ್ಮವರಿಗೆ ಒಂದು ಚೀಟಿ ಬರೆದು ಕಳುಹಿಸಿದ್ದರು. "ಇಸ್ಪೀಟ್ ಆಡೋಣ, ಬನ್ನಿ" ಅಂತಲೋ, ಅಂದೆ ನಾನು. ಇವರು "ಊಹುಂ, ಅದಕ್ಕಲ್ಲ. ಕೇಳಿಲ್ಲ ತಮಾಷೇನ ಬಾ! ಕೂತುಕೊ," ಅಂದರು. ಮುನಿರಾಜಯ್ಯನಿಗೆ ಹತ್ತು ರೂಪಾಯಿ ಸಾಲ ಬೇಕಂತೆ, ಅಂದರು. ಕೊಟ್ಟು ಅವರ ಮುಖದಿಂದ ಬೆವರಿಳಿಸಬೇಕು, ಪಾತಮ್ಮನವರ ಜಂಬ ಮುರಿಯಬೇಕು, ಅಂತ ಹೇಳಿ ನಾನು, ನನ್ನ ಹತ್ತಿರ ನನ್ನ ತಾಯಿ ಗೌರಿ ಹಬ್ಬಕ್ಕೆ ಕಳುಹಿಸಿದ್ದ ಹತ್ತು ರೂಪಾಯಿ ನೋಟನ್ನು ಇವರ ಕೈಗೆ ಕೊಟ್ಟೆ. ಎರಡು ತಿಂಗಳಾದರೂ ಹಣ ಬರಲೇ ಇಲ್ಲ. "ಗೊತ್ತಿದೆಯಲ್ಲೇ ನಿನಗೆ, ಮುನಿರಾಜಯ್ಯನ ಮ್ಲೇಚ್ಛತನ!" ಅಂದರು ಇವರು. ನಾನು ಬಿಟ್ಟೇನೆಯೇ, ಅಷ್ಟು ಸುಲಭದಲ್ಲಿ!.......ಹತ್ತು ರೂಪಾಯಿ ನೋಟು ನನ್ನದು. ಗಂಡಸರು ತಮ್ಮ ತಮ್ಮ ಸಾಲಗಳನ್ನ ಸಕಾಲದಲ್ಲಿ ತೀರಿಸದೆ ಇರುವುದಕ್ಕೆ ಹೆಂಗಸರ ಅಸಡ್ಡೆಯೇ ಕಾರಣ ಅಂತ ನಾನು ಬಲ್ಲೆ. ಅದೂ ಅಲ್ಲದೆ, ಪಾತಮ್ಮನವರನ್ನ ಅವಮಾನ ಪಡಿಸುವುದಕ್ಕೆ ಒಳ್ಳೇ ಸಂದರ್ಭ ದೊರೆತಿರುವಾಗ ಅದನ್ನುಪಯೋಗಿಸಿಕೊಳ್ಳದೆ ಇರುವುದೇ ದಡ್ಡತನ ಅನ್ನಿಸಿತು. ಗಂಡಸರನ್ನೇ ಸಾಲದ ವಸೂಲಿಗೆ ಬಿಟ್ಟರೆ, ನನ್ನ ಗೌರೀ ಕಾಸು ಹಿಂದಕ್ಕೆ ಬರುವ ಹಾಗಯೇ ಕಾಣಲಿಲ್ಲ. ಕೇಳಿದವರಿಗೆ ಅವಮಾನವಾಗಲಿ ಅಂತ ತೆಗೆದುಕೊಟ್ಟದ್ದಾಯಿತು. ಈಗ ವಸೂಲಿ!

ನಾನೇ ಆತನ ಹೆಂಡತಿಯನ್ನ ಒಂದು ದಿನ ಸಮಾಜದಲ್ಲಿ ಕೇಳೇ ಬಿಟ್ಟೆ! ಪಾತಮ್ಮನವರು ಸಾಕ್ಷಾತ್ ಭದ್ರಕಾಳಿಯ ಹಾಗೆ ರೇಗಿದರು. "ನಾವೇನು ನಿಮ್ಮಂತಹ ಕಿಸಿಬಾಯಿ ದಾಸಯ್ಯಗಳೇ? ಡಿಪ್ಟಿ ಕಮಿಷನರ್ ಹೆಂಡತಿಯಂತಹ ದೊಡ್ಡ ದೊಡ್ಡವರ ಸಹವಾಸದಲ್ಲಿ ನಮಗೆ ಈ ಹೀನ ವಿಷಯಗಳು ಹೊಳೆಯುವುದೇ ಇಲ್ಲ. ನಿಮ್ಮ ಯಜಮಾನರು ನಮ್ಮವರ ಹತ್ತಿರ ಕಸಿದುಕೊಂಡಿರುವ ಹಣವನ್ನೆಲ್ಲ ಹಿಂದಕ್ಕೆ ಕೊಡಿಸಿ, ಸಾಕು! ಸಾಲವಂತೆ, ಸಾಲ! ನಿಮ್ಮ ಯಜಮಾನರಂತಹ ಸಾವಿರ ಜನ........ಹುಂ..... ಬೇಡಿ, ಈಗ, ಆ ಮಾತು! ನನಗನ್ನಿಸುತ್ತೆ, ನಿಮ್ಮ ಹತ್ತಿರ ಹಣವಿರುವುದನ್ನ ಪತ್ತೆ ಹಚ್ಚಿ ಅದನ್ನ ಕಬಳಿಸುವುದಕ್ಕೆ ನಿಮ್ಮವರು ಮಾಡಿರುವ ತಂತ್ರವೆ ಇದು! ಅನ್ಯಾಯವಾಗಿ ಅವರಿವರನ್ನ ದೂರಬೇಡಿ!........ನಿಮ್ಮವರಿಂದ ಆ ಹಣಾನ ವಸೂಲು ಮಾಡುವ ಉಪಾಯ ನಿಮಗೆ ಗೊತ್ತಿಲ್ಲದಿದ್ದರೆ, ನಾನೇನು ಮಾಡಬಲ್ಲೆ!" ಅಂದಳು

ಅವಳು ಹೇಳಿದ್ದು ಸರಿ, ಅನ್ನಿಸಿತು! ......ಸಮಾಜಕ್ಕೆ ರಾಜಿನಾಮೆ ಕೊಟ್ಟೆ. ಮನೆಗೆ ರಾಜಿನಾಮೆ ಕೊಡುವಹಾಗಿಲ್ಲವಲ್ಲ, ಹಾಳು ಹಿಂದೂ ಜನಾಂಗದಲ್ಲಿ ಇನ್ನೂ!

—ಶ್ರೀಮತಿ ಕೇಸರಿ.

———o———

# ಬೇಕಾಗಿದೆ

ಮೋಲದನು ಇಂಜಿನಿಯರಿಂಗ್ ಇಲಾಖೆಯಲ್ಲಿ ಕೆಲಸಕ್ಕೆ ಸೇರಿಕೊಂಡನು. ತುಂಬು ಪ್ರಾಯ, ಕೆಂಪಾನೆ ಹುಡುಗ, ತಕ್ಕಮಟ್ಟಿಗೆ ಸ್ಥಿತಿವಂತ, ಸಮರ ಕಾಲ ಸರಪರಾಜಿನ ಶಾಖೆಯಲ್ಲಿ ಕೆಲಸ. ಅಂದಮೇಲೆ ಕೇಳಬೇಕೆ? ಮದುವೆ ಮಾಡಿ ಕೊಂಡು, ಸುಖಪಡಬೇಕೆಂಬ ಹಂಬಲ. ಆದರೆ, ಎಲ್ಲದಕ್ಕೂ ಒಂದು 'ರೆ' ಇದೆ ಯಲ್ಲ—ತಾಯಿ ತಂದೆಗಳಿಲ್ಲ, ದೊಡ್ಡವರಾರೂ ಇಲ್ಲ, ಮುಂದೆ ಒಂದು ಕಾರ್ಯ ವನ್ನು ಮಾಡಲು ತಾನೇ ಮುನ್ನುಗ್ಗಬೇಕು. ಆದರೆ, ಕಂಡವರ ಮನೆ ಬಾಗಿಲಿಗೆ ಹೋಗಿ ಹೆಂಡಿರನು ಕೊಡು ಎಂದರೆ, ಕೆನ್ನೆಗೆ ಹಾಕದೆ ಬಿಡುತ್ತಾರೆಯೇ? ಆ ವೇಳೆಗೆ ಪತ್ರಿಕೆಗಳ ನೆನಪಾಯಿತು. ಸರಿ! ಒಂದು ಜಾಹಿರಾತು ಹಾಕಿಯೇ ಬಿಡೋಣ ಎಂದು ತೀರ್ಮಾನಿಸಿದ. ರಾತ್ರಿಯೆಲ್ಲಾ ಕುಳಿತು ಜಾಹೀರಾತನ್ನು ಅಣಿಮಾಡಿದ, ಪತ್ರಿಕೆಗಳಿಗೆ ಕಳಿಸಿಯೂ ಬಿಟ್ಟ.

"ಬೇಕಾಗಿದೆ"

ಅಂ. ಸೆ. ೧೦೮

ಎಳೆ ಮೀಸೆಯ, ತಿಳಿನಗುವಿನ, ಶ್ರೀಮಂತ ಯುವಕನಿಗೆ,

ವಧು — ಒಂದು.

ವಯಸ್ಸು — ಸುಮಾರು ಹದಿನೆಂಟು.
(ಶೇಕಡ ಹತ್ತರಷ್ಟು ಹೆಚ್ಚು ಕಡಿಮೆ ಇರಬಹುದು)

ಗಾತ್ರ ಚೌಕಟ್ಟು — ಎತ್ತರದಲ್ಲಿ ಅರ್ಧಕ್ಕೂ ಕಡಿಮೆ ಗಾತ್ರ ಇರಬೇಕು.

ರೂಪು — ಕಣ್ಣಿಗೆ ತಂಪಾಗಿರಬೇಕು.

ಗುಣ — ಸಾತ್ವೀಕ, ಸ್ವಲ್ಪ ರಜೋ ಇದ್ದರೂ ಬಾಧಕವಿಲ್ಲ. ಖಂಡಿತ ತಾಮಸ ಕೂಡದು.

ಸಂಗೀತ, ಸಾಹಿತ್ಯ ಇತ್ಯಾದಿ — ಅಪೇಕ್ಷಣೀಯ, ಆಕ್ಷೇಪಣೀಯವಾಗ ಬಾರದು.

ನಿಬಂಧನೆಗಳಿಗೊಪ್ಪುವವರು ಮೇಲ್ವಿಳಾಸಕ್ಕೆ ಕೂಡಲೇ ಬರೆಯಿರಿ. ನಿಲು ಚಿತ್ರವನ್ನು ಕೊಟ್ಟರೆ ಒಳಿತು. ತಕರಾರುಗಳು ಯಾವುದೂ ಇರಕೂಡದು. ಒಪ್ಪಂದವಾದರೆ, ಮಾಲೀಕನಿಗೆ ಸ್ಥಿರಸ್ವತ್ತು ಎಂಬುದನ್ನು ಈಗಲೇ ತಿಳಿಯುವುದು. ಒಪ್ಪಂದವಾದ ಮೂರು ತಿಂಗಳಲ್ಲೇ ಸ್ವಾಧೀನಕ್ಕೆ ಬರಲು ಸಿದ್ಧರಿರಬೇಕು.

* * *

ಎಷ್ಟೇ ಆಗಲಿ, ಇಂಜನಿಯರಿಂಗ್ ಸರಬರಾಜು ಶಾಖೆ ಜಾಹೀರಾತಾದರೂ ಸರಪರಾಜಿಗೆ ಸಂಬಂಧವಲ್ಲವೇ?

 

# ಸಮಾಜ ಋಣ



ತುಂಬಿದ ರಸ್ತೆ. ಮೋಟಾರುಗಳು, ಬೈಸ್ಕಲ್ಲುಗಳು, ಜಟಕಾ ಗಾಡಿಗಳು, ಎತ್ತಿನ ಗಾಡಿಗಳು, ಕತ್ತೆಗಳು, ಹಸುಗಳು, ಬೆಕ್ಕುಗಳು, ಇಲಿಗಳು, ಹೆಗ್ಗಣಗಳು, ಪೋಲೀಸಿನವರು ಎಲ್ಲರಿಗೂ ಹಕ್ಕುಳ್ಳ ನಗರದ ರಸ್ತೆ! ಇದ್ದಕ್ಕಿದ್ದ ಹಾಗೆ ಒಂದು ಚಿಕ್ಕ ಮಗುವು ರಸ್ತೆಯ ಮಧ್ಯದಲ್ಲಿ ಅಡ್ಡಲಾಗಿ ಓಡಿಬರುವುದು ಜೊತೆಯಲ್ಲಿ ದೊಡ್ಡವರು ಯಾರೂ ಇಲ್ಲ. ಮೋಟಾರುಗಳು ಚೀರುತ್ತಾ ಸೊಟ್ಟ ಸೊಟ್ಟಾಗಿ ನಿಲ್ಲುವುವು. ಜಟಕಾಗಳು, ಬೈಸ್ಕಲ್ಲುಗಳು ಒಂದರಮೇಲೊಂದು ಸವಾರಿ. ಸಮಯದಲ್ಲಿ ಪೋಲೀಸರು ಯಾರೂ ಕಾಣುವುದಿಲ್ಲ. ಆಗ ನಾಗರಿಕರಾದ ನೀವೇನು ಮಾಡುವಿರಿ? ಎಡುವುವುದು, ಮುಗ್ಗರಿಸುವುದನ್ನು ಸಹ ಲೆಕ್ಕಿಸದೆ ನುಗ್ಗಿ ಹೋಗಿ ಮಗುವನ್ನೆತ್ತಿಕೊಂಡು ರಕ್ಷಿಸುವಿರಿ. ಮುಂದೇನು? ಮಗುವನ್ನು ಅದರ ತಂದೆ ತಾಯಿಗಳಿಗೆ ಒಪ್ಪಿಸುವುದು. ಅವರನ್ನು ಪತ್ತೆ ಹಚ್ಚುವುದು ಹೇಗೆ?

"ನಿಮ್ಮ ತಂದೆಯ ಹೆಸರೇನಪ್ಪಾ?" ಎಂದು ಕೇಳುವಿರಿ.

"ಅಣ್ಣ" ಎಂದು ಹೇಳುವುದು.

"ತಾಯಿಯ ಹೆಸರೇನು?"

"ಅಮ್ಮ!"

"ಇರುವುದು ಎಲ್ಲಿ?"

"ನಂಮನೇಲಿ"

"ಎಲ್ಲಿ ನಿಮ್ಮ ಮನೆ?"

"ಅ.......ಲ್ಲಿ" ಎಂದು ಪ್ರಪಂಚಕ್ಕೆಲ್ಲಾ ಕೈ ತೋರಿಸುವುದು ಇದು ಪ್ರಯೋಜನವಿಲ್ಲವೆಂದು ಪೋಲೀಸ್ ಸ್ಟೇಷನ್ನಿಗೆ ಕರೆದುಕೊಂಡು ಹೋಗುವಿರಿ. ಅಲ್ಲಿ ಪೋಲೀಸಿನವನು "ಸ್ಟೇಷನ್ನಿನಲ್ಲಿ ನಾನೊಬ್ಬನೇ ಇರುವುದು. ಬಿಟ್ಟು ಹೋಗುವುದಕ್ಕಾಗುವುದಿಲ್ಲ. ನಮ್ಮ ಇನ್ಸ್‌ಪೆಕ್ಟರು ಬರುವವರೆಗೂ ಮಗುವನ್ನು ಇಲ್ಲಿಯೇ ಬಿಟ್ಟು ಹೋಗಿ. ಅಷ್ಟರಲ್ಲಿ ಅವರ ಮನೆಯವರೇ ಹುಡುಕಿಕೊಂಡು ಬರಬಹುದು" ಎನ್ನುವನು.

ಮಗುವಾದರೋ ನಮ್ಮ ರಕ್ಷಣಾಗ್ರೇಸರನೆಂದೆನಿಸಿಕೊಂಡಿರುವ ಪೋಲೀಸಿನವನನ್ನು ಕಂಡ ಒಡನೆ ಕಿಟೋ ಎಂದು ಕಿರಿಚಿ ಅಳುವುದಕ್ಕಾರಂಭಿಸುವುದು. ನೀವು ಸಮಾಧಾನ ಪಡಿಸಲೆತ್ನಿಸುವಿರಿ. "ಸುಮ್ಮನಿರು, ಮಗು, ಪೋಲೀಸಿನವರು ನಮ್ಮ

ಸ್ನೇಹಿತರು. ಇಂಗ್ಲೆಂಡಿನಲ್ಲಿ ಚಿಕ್ಕ ಮಕ್ಕಳು ದಾರಿ ತಪ್ಪಿದರೆ, ಮೊದಲು ಪೋಲೀಸಿನವನ ಹತ್ತಿರ ಹೋಗುವರು'' ಎನ್ನುವಿರಿ. ಮಗುವಾದರೋ ಈ ತತ್ತ್ವವನ್ನು ಗ್ರಹಿಸದೆ ಮತ್ತೂ ಘಟ್ಟಿಯಾಗಿ ಅಳುವುದು. ಒಳೆಯ ಗ್ರಹಚಾರ ಬಂತಲ್ಲಾ ಎಂದಂದುಕೊಂಡು ನೀವು ಮಗುವನ್ನು ಕರೆದುಕೊಂಡು ಹೋಗಿ, ಮಿಠಾಯಿ, ಪೆಪ್ಪರಮಿಂಟು ಕೊಡಿಸುವಿರಿ. ಕೊನೆಗೆ ಬೀದಿ ಬೀದಿ ತಿರುಗಿ, ಮನೆಯನ್ನು ಪತ್ತೆ ಮಾಡಿ, ಮಗುವನ್ನು ತಂದೆ ತಾಯಿಗಳಿಗೆ ಒಪ್ಪಿಸುವಿರಿ.

ಮನೆ ಸೇರಿದ ಕೂಡಲೇ ಮಗುವು ಘಟ್ಟಿಯಾಗಿ ಅಳುತ್ತಾ ಅಮ್ಮನ ಬಳಿ ಓಡುವುದು. ಆ ಅಪ್ಪ ಅಮ್ಮಂದಿರು ನೀವು ಪಟ್ಟ ಕಷ್ಟವನ್ನು ಕಾಣದೆ, "ಯಾಕ್ರೀ, ಮಗುವನು ಹೀಗೆ ಅಳಿಸಿದಿರಿ? ಅಯ್ಯೋ ಪಾಪ, ಎಲ್ಲೋ ಬೀಳಿಸಿಬಿಟ್ಟಿದ್ದೀರಿ—ಮೈಯೆಲ್ಲಾ ಮಣ್ಣಾಗಿ ಹೋಗಿದೆ. ಬಾಮ್ಮಾ!'' ಎಂದು ಒಬ್ಬರು ತಪ್ಪಿ ಒಬ್ಬರು ಎತ್ತಿ ಮುದ್ದಾಡುವುದರಲ್ಲಿ ನೀವು ನಿಂತಿರುವುದನ್ನೇ ಮರೆಯುವರು. ಕಡೆಗೆ ನೀವು "ನಾನು ಬರಲೇ?'' ಎಂದು ಕೇಳಿದಾಗ ಅಪ್ಪನು ಒಳಗೆ ಹೋಗಿ,

"ಲೇ, ಮಗು ಕಿವಿಯಲ್ಲಿದ್ದ ಹತ್ತಕಡಕು ಎಲ್ಲಾ ಸರಿಯಾಗಿದೆಯೋನೇ, ನೋಡಿದಿಯಾ?" ಎಂದು ಕೇಳುವನು.

ಆಕೆಯು "ಅದೇನೋ ಸರಿಯಾಗಿದೆ. ಆದರೆ, ಅದರ ಜೇಬಿನಲ್ಲಿಟ್ಟಿದ್ದ ಒಂದಾಣೆ ಬಿಲ್ಲೆಯೇ ಇಲ್ಲವಲ್ಲಾಂದ್ರೇ!" ಎನ್ನುವಳು.

ಆತನು "ಹೋಗಲಿ ಬಿಡು, ಎಲ್ಲೋ ಅದರಲ್ಲೇ ಮೂರು ಕಾಸಿಗೆ ಪೆಪ್ಪರುಮೆಂಟು ತೆಗೆದುಕೊಟ್ಟುಬಿಟ್ಟು, ಮಿಕ್ಕದ್ದಕ್ಕೆ ತಾನು ಕಾಫಿ ಕುಡಿದು ಬಿಟ್ಟಿದ್ದಾನೆ ಎಂದು ತೋರುತ್ತೆ'' ಎಂದು ಹೇಳಿ, ಹೊರಗೆ ಬಂದು "ಮಗುವಿನ ಜೇಬಿನಲ್ಲಿ ಒಂದಾಣೆ ಇತ್ತಂತೆ—ಎಲ್ಲೋ, ಹುಡುಕಿದರೂ ಈಗ ಸಿಕ್ಕಲಿಲ್ಲ—ಹೋಗಲಿ ಬಿಡಿ. ಮಗು ಹುಷಾರಾಗಿ ಮನೆಗೆ ಬಂದನಲ್ಲಾ, ಅಷ್ಟೇ ಸಾಕು. ಹೊರಡುವಿರಾ?'' ಎಂದು ಬೀಳ್ಕೊಡುವನು!

ನೀವೇನಾದರೂ ಪಟ್ಟ ಕಷ್ಟಕ್ಕೆ ಒಂದು ಬಟ್ಟಲು ಕಾಫಿ ದೊರೆಯಬಹುದೆಂಬ ಆಶೆ ಇಟ್ಟಿದ್ದರೆ, ಅದಕ್ಕೆ ಸೊನ್ನೆ. ಅಲ್ಲದೆ, ಮಗು ಜೇಬಿನಲ್ಲಿ ಒಂದಾಣೆಯನ್ನೇ ಹೊಡೆದಿರುತ್ತೀರೆಂಬ ಸಂಶಯಾಪವಾದ ಬೇರೆ! ಅಂತೂ ಏತಕ್ಕೆ ಈ ಕೆಲಸಕ್ಕೆ ಕೈ ಹಾಕಿದೆ, ಮಗುವಿಗೆ ಏನಾಗಿದ್ದರೆ ನನಗೇನು, ನನ್ನ ಮಗುವಲ್ಲವಲ್ಲಾ ಎಂದು ನಿಮ್ಮನ್ನು ನೀವೇ ಅಂದುಕೊಂಡು ಮನೆಗೆ ಹೊರಡಬಹುದು. ಆದರೆ, ಅದಕ್ಕೆ ನಮ್ಮ ಶಿವಣ್ಣನು ಒಂದು ಸಮಾಧಾನ ಹೇಳುವನು: ದೊರೆಯುವ ಪ್ರತಿಫಲ ಹೇಗಾದರೂ ಇರಲಿ, ನೀವು ತೀರಿಸಬೇಕು—ಸಮಾಜ ಋಣ!

*　　*　　*

ಬಸ್ಸು ಕಿಕ್ಕಿರಿದು ನೆರೆದಿದೆ. ನಿಲ್ಲಲು ಸಹ ಜಾಗವಿಲ್ಲ. ಕಂಡಕ್ಟರು ಹತ್ತಿದ್ದ ಕೆಲವರನ್ನು ಇಳಿಸುತ್ತಿದ್ದಾನೆ. ನೀವೇನೋ ಸಲೀಸಾಗಿ ಉಸಿರಾಡುತ್ತ, ನಿಮ್ಮ ಜಾಗವನ್ನು ಭದ್ರವಾಗಿ ಅಂಟಿ ಕೂತಿದ್ದೀರಿ—ಕಂಡಕ್ಟರು ನಿಮ್ಮನ್ನೇನೂ ಮಾತ ನಾಡಿಸುವ ಹಾಗಿಲ್ಲ. ಮುಕ್ಕಾಲು ಘಂಟೆ ಕಾದು, ಸಂದಣಿಯಲ್ಲಿ ನುಗ್ಗಿ, ಹೊಡೆ ದಾಡಿ, ಒದೆಸಿಕೊಂಡು, ಪರಚಿಸಿಕೊಂಡು, ಅಂಗಿ ಹರಿದುಕೊಂಡು, ಅಂತೂ ಒಂದು ಜಾಗವನ್ನು—ಅದೂ ಒಬ್ಬರೇ ಕೂಡುವ ಸ್ಥಳವನ್ನು ಆಕ್ರಮಿಸಿದ್ದಾಯಿತು. ಸಾಲ ದ್ದಕ್ಕೆ, ಬೇಕಾದ ಚಿಲ್ಲರೆಯನ್ನೂ ಸಹ ಕೈಯ್ಯಲ್ಲಿಯೇ ಇಟ್ಟುಕೊಂಡಿದ್ದೀರಿ. ಬೀಡಿ ಸಿಗರೇಟು ಅಥವಾ ವಗ್ಗೈರೆಗಳನ್ನೂ ಕೂಡ ಸೇದುತ್ತಿಲ್ಲ. ಅಂದಮೇಲೆ, ಖಂಡಿತ ವಾಗಿಯೂ ನಿಮ್ಮನ್ನು ಕದಲಿಸುವಂತಿಲ್ಲ. ಕಂಡಕ್ಟರು ಟಿಕೆಟ್ಟು ಕೊಡುವ ಸಡಗರ ದಲ್ಲಿದ್ದಾನೆ. ಗಾಡಿ ಇನ್ನೂ ಹೊರಟಿಲ್ಲ. "ಹಾಳು ಬಸ್ಸು ಬೇಗ ಹೊರಡ ಬಾರದೆ" ಎಂದಂದುಕೊಳ್ಳುತ್ತಾ, ಮನೆಯ ಕಡೆ ಯೋಚನೆಯಲ್ಲಿರುವಿರಿ —ಮನೆ ಸೇರುವ ಹೊತ್ತಿಗೆ ಕಾಫಿ, ತಿಂಡಿ ಸಿದ್ಧವಾಗಿರುತ್ತೆ. ತಿಂಡಿ ಏನುಮಾಡಿರುತ್ತಾರೋ ಇವತ್ತು? ಮುಕ್ಕಾಲುಪಾಲು ಬಿಸಿ ಬಿಸಿ ಅವರೆಕಾಯಿ ಉಪ್ಪಿಟ್ಟೇ ಇರಬೇಕು. ಅದರ ಜತೆಗೆ ಈರುಳ್ಳಿ ಪಲ್ಯ ಇದ್ದೇ ಇರುತ್ತೆ. ಆ ಮೇಲೆ ಬಾಯಾಡಿಸುವುದಕ್ಕೆ ಸಂಕ್ರಾಂತಿಯ ಎಳ್ಳು ಇನ್ನೂ ಸ್ವಲ್ಪ ಮಿಕ್ಕಿರಬಹುದು............ಇತ್ಯಾದಿ ಸುಖಾ ಲೋಚನೆಗಳಲ್ಲಿರುತ್ತೀರಿ. ಆದರೆ, ವಿಧಿಯು ಸುಮ್ಮನಿರಬೇಕಲ್ಲ. ಸಮಯದಲ್ಲಿ ಹಿಂದಿನಿಂದ ಪೆಟ್ಟುಕೊಡುವುದಕ್ಕೆ ಕಾದೇ ಇರುತ್ತೆ! ಬಸ್ಸು ಇನ್ನೇನು ಹೊರಡ ಬೇಕು ಎನ್ನುವಾಗ,

"ಅಪ್ಪಾ, ಅಪ್ಪಾ, ಕಂಡಕ್ಟರ್! ಒಂದೇ ಒಂದು ಜಾಗ ಕೊಡಪ್ಪಾ!"

ಓಡಿ ಬಂದು ಏದುತ್ತಾ ಏದುತ್ತಾ ದೈನ್ಯದಿಂದ ಕೇಳಿಕೊಳ್ಳುವ ಹೆಂಗಸಿನ ಧ್ವನಿ. ಕಂಡಕ್ಟರು "ಜಾಗ ಇಲ್ಲವಮ್ಮ. ಬೇರೆ ಬಸ್ಸಿನಲ್ಲಿ ಬನ್ನಿ. ರೈಟ್!" ಎನ್ನುವನು. "ನಿಂತುಕೊಂಡಾದರೂ ಬರುತ್ತೇನೆ. ಬೇರೆ ಬಸ್ಸಿಗೆ ಕಾಯುವುದಕ್ಕಾಗುವುದಿ ಲ್ಲಾಪ್ಪಾ,........ಎಳೆ ಮಗುವನ್ನು ಬಿಟ್ಟು ಬಂದಿದ್ದೇನೆ—ಎಷ್ಟು ಅಳುತ್ತೋ ಅದು ........ನಿನಗೆ ಪುಣ್ಯ ಬರುತ್ತಪ್ಪಾ........ದಯವಿಟ್ಟು ಒಂದು ಜಾಗ ಕೊಡು!"

ಧ್ವನಿ ಎಲ್ಲೋ ಕೇಳಿದಂತಿದೆ ಎಂದು ತಿರುಗಿ ನೋಡುತ್ತೀರಿ. ನೋಡಿದರೆ, ಪಕ್ಕದ ಮನೆಯಾಕೆ! ಆಸ್ಪತ್ರೆಯಲ್ಲಿ ಖಾಯಿಲೆಯಿಂದಿದ್ದ ಗಂಡನನ್ನು ನೋಡಿ ಕೊಂಡು ಹಿಂತಿರುಗಿ ಮನೆಗೆ ಹೋಗುತ್ತಿದ್ದಾಳೆ. ಮನೆಯಲ್ಲಿ ಎಳೆ ಮಗು— ನೋಡಿಕೊಳ್ಳುವುದಕ್ಕೆ ಎಂಟು ವರ್ಷದ ಅದರ ಅಕ್ಕನನ್ನು ಬಿಟ್ಟು ಯಾರೂ ಇಲ್ಲ. ಆಗ ನಾಗರಿಕ ಸಮಾಜಕ್ಕೆ ಸೇರಿ ನವನಾಗರಿಕರೆಂದೆನಿಸಿಕೊಂಡಿರುವ ನೀವೇನು ಮಾಡುವಿರಿ? ಮೋರೆಯನ್ನು ಬೇರೆ ಕಡೆ ತಿರುಗಿಸಿ ಸುಮ್ಮನಿರುವಿರಾ? ದೈನ್ಯದ ಬೇಡಿಕೆ........ತಿಳಿದವರು........ಕಷ್ಟದಲ್ಲಿದ್ದ ಹೆಂಗಸು........ಬೇರೆ ಬಸ್ಸು, ಎಷ್ಟು ಹೊತ್ತಿಗೆ ಬರುವುದೋ!........

ನಿಟ್ಟುಸಿರು ಬಿಟ್ಟು, ಬೇಗ ಮನೆ ಸೇರುವ ಆಸೆಯನ್ನು ತೊರೆದು, ಉಪ್ಪಿಟ್ಟು, ಕಾಫಿಗಳ ಯೋಚನೆಗಳನ್ನು ತಳ್ಳಿ, ಎದ್ದು "ನನ್ನ ಜಾಗ ಕೊಡುತ್ತೇನಮ್ಮ, ನೀವು ಕೂತುಕೊಳ್ಳಿ. ನಾನು ಮತ್ತೊಂದು ಬಸ್ಸಿನಲ್ಲ ಬರುತ್ತೇನೆಂದು ಹೇಳಿ, ಇಳಿದು ಆಕೆಗೆ ಸ್ಥಳ ಮಾಡಿಕೊಡುವಿರಿ. ಬಸ್ಸು ಹೊರಟುಹೋಗುವುದು.

ಮುಂದಿನ ಬಸ್ಸಿಗೆ ಕಾಯುವುದು ಪ್ರಯೋಜನವಿಲ್ಲವೆಂದು ನಡೆದುಕೊಂಡೇ ಹೊರಡುವಿರಿ. ನೀವು ಮುಂದಕ್ಕೆ ಕಾಲಿಟ್ಟಕೂಡಲೇ ಕೆಲವು ಮಾತುಗಳು ಕೇಳಿ ಬರುವುವು. "ಈಯಪ್ಪ ನಮಗೀತಕ್ಕೆ ಜಾಗ ಕೊಡಬಾರದಾಗಿತ್ತೋ?—ನಮಗೂ ಅಷ್ಟು ಅವಸರದ ಕೆಲಸ ಎಂದು ಕೇಳಿಕೊಂಡರೂ ಜಾಗ ಬಿಡಲಿಲ್ಲ ........"ಹೆಂಗಸು ಎಲ್ಲೋ ಗೊತ್ತಿರಬೇಕು—ಅದಕ್ಕೇ ಜಾಗ ಕೊಟ್ಟಿರಬೇಕು''........"ಹೌದು, ಹೌದು, ಪೂರ್ವಪರಿಚಯವಿದ್ದಿರಬೇಕು.—ಆಸಾಮಿ ಮುಖ ನೋಡಿದರೇ ತಿಳಿಯುತ್ತೆ, ಆ ರೀತಿ ಮನುಷ್ಯ ಎಂದು!'' (ನಗು).

ಹರಕು ಜನರು, ಹೊಲಸು ಮನಸ್ಸಿನವರು ಎಂದಂದುಕೊಂಡು ಮುಂದೆ ನಡೆಯುವಿರಿ. ನಡೆದು, ನಡೆದು, ಕೊನೆಗೆ "ಉಸ್ಸಪ್ಪಾ!'' ಎಂದು ಮನೆ ಸೇರುವಿರಿ. ಉಪ್ಪಿಟ್ಟು, ಕಾಫಿ ಎಲ್ಲಾ ಆರಿಹೋಗಿ ರುಚಿಯೇ ಕಾಣಿಸುವುದಿಲ್ಲ. ಎಳ್ಳೂ ಸಹ ಗೈರುಹಾಜರು. ಮನೆಯಾಕೆಯ ಮುಖವೂ ಸ್ವಲ್ಪ ಬಿರುಸಾಗಿಯೇ ಕಾಣುತ್ತೆ

"ಕಾಫಿ ಸ್ವಲ್ಪ ಬಿಸಿಯಾಗಿಟ್ಟಿರಬಾರದಾಗಿತ್ತೆ?'' ಎನ್ನುವಿರಿ.

"ಸರಿ, ಎಷ್ಟು ಹೊತ್ತು ಎಂದು ಬಿಸಿ ಇಡುವುದು? ಬೀದಿಯಲ್ಲಿ ಹೋಗುವ ಹೆಂಗಸರಿಗೆಲ್ಲಾ ನೀವು ಜಾಗ ಕೊಡುತ್ತಾ ಕುಳಿತುಕೊಂಡಿರಿ. ನಾನು ಇಲ್ಲಿ ಕಾಫಿ ಬಿಸಿ ಇಡುತ್ತಾ ಕಾದಿರುತ್ತೇನೆ'' ಎಂಬ ಉತ್ತರ!—ಸಮಾಚಾರವು ನೆರೆಮನೆಯಿಂದ ಆಗಲೇ ತಲಪಿಬಿಟ್ಟಿರುತ್ತೆ. ಆದರೆ, ಅದರ ಫಲ ಹೀಗಿರುತ್ತೆಂದು ನೀವು ಯೋಚಿಸಿರುವುದಿಲ್ಲ. ಇನ್ನು ಮೂರು ದಿವಸ ಮನೆಯಲ್ಲಿ ವಾತಾವರಣವು ಸ್ವಲ್ಪ ಹಿತಕರವಾಗಿರುವುದಿಲ್ಲವೆಂದು ನಿಮಗೆ ಗೊತ್ತು. ಸುಮ್ಮನಿರಲಾರದೆ ನಾನೇಕೆ ಆಕೆಗೆ ಸಹಾಯಮಾಡಲು ಹೋದೆ—ಆಕೆ ಎಷ್ಟು ಹೊತ್ತು ಕಾದಿದ್ದರೆ ನನಗೇನು? ಏನು ಮುಠ್ಠಾಳ ಕೆಲಸ ಎಂದು ನಿಮ್ಮನ್ನು ನೀವೇ ಬೈದುಕೊಳ್ಳುವಿರಿ.

ಆದರೆ, ನಮ್ಮ ಶಿವಣ್ಣನನ್ನು ಕೇಳಿದರೆ, ಹೇಳುವನು. ಅದು ನೀವು ತೀರಬೇಕಾದ—ಸಮಾಜ ಋಣ!

*　　*　　*

"ದೇವ ಋಣ, ಋಷಿ ಋಣ, ಪಿತೃ ಋಣಗಳೊಂದಿಗೆ ಆಧುನಿಕ ನಾಗರಿಕತೆಯಲ್ಲಿ ಮಾನವನು ತೀರಿಸಬೇಕಾದದು ಮತ್ತೊಂದಿದೆ—ಸಮಾಜ ಋಣ! ಕಾಡು ಮೇಡುಗಳನ್ನು ಬಿಟ್ಟು, ನಾಗರಿಕರಾಗಿ, ಎಂದು ನಾವು ಒಟ್ಟಿಗೆ ಪಂಗಡಗಳಲ್ಲಿ

ವಾಸಿಸತೊಡಗಿದೆವೋ ಅಂದೇ ಶುರುವಾಯಿತು ನಮ್ಮ ಸಮಾಜ ಋಣ. ಅದನ್ನು ತೀರಿಸದೆ ವಿಧಿಯೇ ಇಲ್ಲ" ಎಂಬುದೇ ನಮ್ಮ ಶಿವಣ್ಣನ ತತ್ತ್ವೋಪದೇಶ. ಇದರ ಮೇಲೆ ಅನೇಕ ಉಪನ್ಯಾಸಗಳನ್ನು ಕೂಡ ಕೊಟ್ಟಿದ್ದಾನೆ. ಉಪದೇಶಕ್ಕೆ ತಕ್ಕಂತೆ ನಡೆಯುವವನೂ ಹೌದು. ಅವನು ಬೀದಿಯಲ್ಲಿ ಎಲ್ಲಿಯಾದರೂ ಮುಳ್ಳಾಗಲೀ, ಗಾಜಿನ ಚೂರಾಗಲಿ, ಮೊಳೆಯಾಗಲಿ ಅಥವಾ ಒಂದು ಸಣ್ಣ ಗುಂಡು ಸೂಜಿಯೇ ಆಗಲಿ ಬಿದ್ದಿರುವುದನ್ನು ಕಂಡರೆ, ಎಷ್ಟು ತುರ್ತಿನ ಕೆಲಸವಿದ್ದರೂ, ಅದನ್ನು ತೆಗೆದು ಮುನಿಸಿಪಲ್ ಕಸದ ಡಬ್ಬಿಗೆ ಹಾಕದೆ ಮುಂದಕ್ಕೆ ಹೆಜ್ಜೆಯೇ ಇಡುತ್ತಿರಲಿಲ್ಲ. ಒಂದು ಸಲ ಬೀದಿಯ ಸಾರ್ವಜನಿಕ ನಲ್ಲಿಯೊಂದು ಕೆಟ್ಟುಹೋಗಿ ಧಾರಾಕಾರವಾಗಿ ನೀರು ಕೊಚ್ಚಿಹೋಗುತ್ತಿರುವುದನ್ನು ಕಂಡು, ಬೇರೆ ಹೇಗೂ ನಿಲ್ಲಿಸುವುದಕ್ಕೆ ಆಗದೆ, ಕತೆಯಲ್ಲಿ ಹೇಳಿರುವಂತೆ ತನ್ನ ಬೆರಳನ್ನೇ ಕೊಳಾಯಿ ಬಾಯಿಗೆ ತುರುಕಿ ಇಲಾಖೆಯವರು ಬಂದು ಸರಿಮಾಡುವವರೆಗೂ ಅಂದರೆ, ಆರು ಘಂಟೆಗಳ ಕಾಲ—ಕುಳಿತಿದ್ದನು. ಇಲಾಖೆಯವರು ಮೊದಲೇ ಏತಕ್ಕೆ ತಿಳಿಸಲಿಲ್ಲ ಎಂದು ಇವನ ಮೇಲೆಯೇ ಆಗ್ರಹಗೊಂಡರೂ ಸಹಿಸಿಕೊಂಡು ಜಜ್ಜಿಹೋಗಿದ್ದ ಬೆರಳನ್ನು ಮೂರು ತಿಂಗಳು ಕಾಲ ಔಷಧ ಹಾಕಿ ಕಟ್ಟಿದ್ದನು. ಆದರೂ, ಎದೆಗುಂದದೆ ಋಣಮುಕ್ತನಾಗುವುದನ್ನು ಬಿಡದಂಥಾ ವೀರ.......

ಮೊನ್ನೆ ಅವನ ಕೇಸಿನ ತೀರ್ಪನ್ನು ಓದಿದಾಗ ಅನ್ನಿಸಿತು—ಋಣವನ್ನು ಎಷ್ಟೊಂದು ಕಳೆಯಲು ಪ್ರಯತ್ನಪಟ್ಟರೂ, ವಿಧಿಯು ವಿಪರೀತವಾಗಿದ್ದರೆ, ವಿಫಲ ಎಂದು. ಏಕೆಂದರೆ, ಈಗ ನೋಡಿ, ನಮ್ಮ ಶಿವಣ್ಣನ ವಿಚಾರವನ್ನೇ ತೆಗೆದುಕೊಳ್ಳೋಣ. ಈಗ ಎರಡು ತಿಂಗಳುಗಳ ಹಿಂದೆ ಇವನು ಬೀದಿಯಲ್ಲಿ ಹವಾ ತೆಗೆದುಕೊಂಡು ಬರುವುದಕ್ಕೆಂದು ಹೋಗಿದ್ದಾಗ, ರಸ್ತೆಯ ಪಕ್ಕದಲ್ಲಿ ಯಾರೋ ಮಲಗಿದ್ದಂತೆ ಕಂಡುಬಂದಿತು. ಇಲ್ಲಿ ಏತಕ್ಕೆ ಮಲಗಿದ್ದಾನೋ, ಏನಾದರೂ ನೋವಿರಬಹುದು, ಸಹಾಯ ಬೇಕೇನೋ ಎಂದು ಹತ್ತಿರ ಹೋಗಿ ನೋಡಿದನು. ಕೃಶಿಸಿಹೋಗಿದ್ದ ದೇಹ. ಚಿಂದಿಯ ಉಡುಪು. ಅಲುಗಾಡದೆ ಬಿದ್ದಿದ್ದನು. ಶಿವಣ್ಣನು ಮುಟ್ಟಿ ನೋಡಿದನು—ಮೈ ತಣ್ಣಗಾಗಿತ್ತು. ಉಸಿರಾಡುವುದು ಕಾಣಿಸಲಿಲ್ಲ. ಮೂರ್ಛೆ ಹೋಗಿರಬಹುದೆಂದು ಅವನ ಕುತ್ತಿಗೆಯ ಸುತ್ತಲೂ ಕಟ್ಟಿದ್ದ ಒಂದು ವಸ್ತ್ರವನ್ನು ಸಡಿಲಿಸಿ, ಶೈತ್ಯೋಪಚಾರಮಾಡಿದನು. ನಾಡಿಯು ಕಾಣಿಸಲೇ ಇಲ್ಲ. ಕೊನೆಗೆ ಪ್ರಾಣವು ಹೋಗಿದೆಯೆಂದು ನಿರ್ಧರಿಸಿದನು. ಆಗೇನು ಮಾಡಬೇಕು? ಸತ್ತು ಬಿದ್ದಿದ್ದ ಮನುಷ್ಯನನ್ನು ಬಿಟ್ಟು ಹೊರಟುಹೋಗುವುದು ಸಮಾಜ ಧರ್ಮಕ್ಕೆ ವಿರುದ್ಧ. ಸರಿ, ಅಲ್ಲಿಯೇ ಕೂತನು. ಆ ಬೀದಿಯಲ್ಲಿ ಹೋಗುತ್ತಿದ್ದವರ ಕೈಲಿ ಪೋಲೀಸಿನವರಿಗೆ ಹೇಳಿಕಳುಹಿಸಿದನು. ರಾತ್ರಿಯಾಯಿತು. ಎರಡು ಗಂಟೆಗಳ ಮೇಲೆ ಪೋಲೀಸಿನವರು ಬಂದು ಮಹಜರು ನಡೆಸಿದರು. ಶವವು ಉತ್ತರ ದಕ್ಷಿಣವಾಗಿ ರಸ್ತೆಯ ಪಕ್ಕದಲ್ಲಿ ಬಿದ್ದಿದ್ದಿತೆಂದೂ, ಶಿವಣ್ಣನು ಅದರ ಬಳಿಯಲ್ಲಿದ್ದನೆಂದೂ, ಬೀದಿಯಲ್ಲಿ ಹೋಗುತ್ತಿದ್ದ ಕೆಲವರು

ಬಂದು ವರ್ತಮಾನ ಕೊಟ್ಟರೆಂದೂ ಬರೆದುಕೊಂಡು, ಶಿವಣ್ಣನ ಹೇಳಿಕೆಯನ್ನು ತೆಗೆದುಕೊಂಡು, ಶವವನ್ನು ಪರೀಕ್ಷೆಗೆ ಕೊಟ್ಟು ಕಳುಹಿಸಿದರು.

ಎರಡು ದಿವಸಗಳ ಮೇಲೆ, ಶಿವಣ್ಣನು, ವಿದ್ಯಾರ್ಥಿಗಳ ಕೂಟವೊಂದರಲ್ಲಿ "ಸಮಾಜದಲ್ಲಿ ನಮ್ಮ ಜವಾಬ್ದಾರಿ" ಎಂಬ ವಿಷಯದಲ್ಲಿ ಉಪನ್ಯಾಸ ಮಾಡುತ್ತಾ, "ಸಮಾಜಕ್ಕೆ ನಾವು ತೀರಿಸಬೇಕಾದ ಸಾಲಗಳಿವೆ. ನಾವು ಆ ಸಾಲಗಳನ್ನು ತೀರಿಸಿ, ನಮ್ಮ ಜವಾಬ್ದಾರಿಯನ್ನು ನಾವು ಕಾಯ್ದುಕೊಂಡರೆ, ಸಮಾಜವು ಖಂಡಿತವಾಗಿಯೂ ನಮ್ಮನ್ನು ಕಾಯುವುದು" ಎಂದು ಹೇಳುತ್ತಿರುವುದಕ್ಕೆ ಸರಿಯಾಗಿ ನಾಲ್ಕು ಜನ ಪೋಲೀಸಿನವರೂ, ಒಬ್ಬ ಇನ್ಸ್ಪೆಕ್ಟರೂ ಸಭಾಂಗಣಕ್ಕೆ ನುಗ್ಗಿ ವೇದಿಕೆಯ ಮೇಲಿದ್ದ ಶಿವಣ್ಣನನ್ನು ಹಿಡಿದು ಬಂಧಿಸುತ್ತಾ, "ನೀನು ಲಿಂಗಪ್ಪನೆಂಬ ಭಿಕ್ಷುಕನನ್ನು ಮೂರು ದಿವಸಗಳ ಕೆಳಗೆ ಖೂನಿ ಮಾಡಿದ್ದೀಯಾದ್ದರಿಂದ ನಿನ್ನನ್ನು ಸೆರೆಹಿಡಿದಿದ್ದೇವೆ. ನೀನೇನಾದರೂ ಈಗ ಹೇಳಿದರೆ, ಅದನ್ನು ನಿನಗೆ ವಿರೋಧವಾಗಿ ಸಾಕ್ಷ್ಯದಲ್ಲುಪಯೋಗಿಸಲಾದೀತು" ಎಂದು ಎಚ್ಚರಿಸಿದರು. ಶಿವಣ್ಣನು ದಿಗ್ಭ್ರಮೆಯಿಂದ ಏನು ಹೇಳುವುದಕ್ಕೂ ತೋರದೆ, "ಉಪನ್ಯಾಸ—ಮುಗಿಸಬೇಕು—ಸಮಾಜ—ನಮ್ಮ ಜವಾಬ್ದಾರಿ ವಿಚಾರ ಅತಿ ಮುಖ್ಯ" ಎಂದು ತೊದಲುತ್ತಾ ಹೇಳಿದನು. ಇನ್ಸ್ಪೆಕ್ಟರು ವ್ಯಂಗವಾಗಿ ನಕ್ಕು "ಈ ವಿಚಾರದಲ್ಲಿ ಕೋರ್ಟಿನಲ್ಲಿ ಇನ್ನೂ ದೊಡ್ಡ ಉಪನ್ಯಾಸ ಕೊಡಿಸುತ್ತೇನೆ—ನಡೆ!" ಎಂದು ಸೆಳೆದುಕೊಂಡು ಹೋದರು.

ವಿಚಾರಣೆಯು ಆರಂಭವಾಯಿತು. ಶವ ಪರೀಕ್ಷೆಯಲ್ಲಿ ಕುತ್ತಿಗೆಗೆ ಬಟ್ಟೆಯನ್ನು ಬಿಗಿದದ್ದರಿಂದ ಉಸಿರಾಡದಂತಾಗಿ ಪ್ರಾಣ ಹೋಗಿತ್ತೆಂದು ಸ್ಥಿರಪಟ್ಟಿತು. ಶವದ ಹತ್ತಿರ ಬಿದ್ದಿದ್ದ ಒಂದು ವಸ್ತ್ರದಿಂದ ಇದಾಗಿರಬಹುದೆಂದು ಡಾಕ್ಟರು ಅಭಿಪ್ರಾಯ ಕೊಟ್ಟರು. ಆ ವಸ್ತ್ರವು ಶಿವಣ್ಣನದೆಂದು ರುಜುವಾತಾಯಿತು. ಆ ವಸ್ತ್ರದಲ್ಲಿ ನೀರು ಅದ್ದಿಕೊಂಡು ಬಂದು ಶವದ ಮುಖದ ಮೇಲೆ ಹಿಂಡಿ, ಶೈತ್ಯೋಪಚಾರ ಮಾಡಿದೆನೆಂಬ ಶಿವಣ್ಣನ ಹೇಳಿಕೆಗೆ, ಅವನು ಹಾಗೆ ಮಾಡಿದುದಕ್ಕೆ ಸಾಕ್ಷಿಗಳಾರೂ ಇಲ್ಲದಿದ್ದುದರಿಂದ ಅದು ಕಟ್ಟು ಕತೆ ಎಂದು ವಾದಿಸಲ್ಪಟ್ಟಿತು. ಶವವು ಭಿಕ್ಷುಕನದೆಂದು ಸ್ಥಿರಪಡಿಸಿದ ಬಳಿಕ, ಪೋಲೀಸಿನವರು ಮೂರು ದಿನಗಳ ಹಿಂದೆ ಆ ಭಿಕ್ಷುಕನು ಶಿವಣ್ಣನ ಮನೆಗೆ ಭಿಕ್ಷಕ್ಕೆ ಹೋಗಿದ್ದನೆಂದೂ, ಭಿಕ್ಷುಕರಿಗೆ ಉತ್ತೇಜನ ಕೊಡುವುದು ಸಮಾಜಕ್ಕೆ ಹಾನಿಯೆಂದು ಶಿವಣ್ಣನು ಅವನನ್ನು ಓಡಿಸುವುದಕ್ಕೆ ಹೋದನೆಂದೂ, ಅದಕ್ಕೆ ಭಿಕ್ಷುಕನು ಸಿಕ್ಕಾಪಟ್ಟೆ ಬೈದನೆಂದೂ, ಅದನ್ನು ಕೇಳಿ ಶಿವಣ್ಣನು ಕೋಪಗೊಂಡು "ನೋಡು, ನಿನಗೆ ಮಾಡುತ್ತೇನೆ" ಎಂದು ಅವನನ್ನು ಹೆದರಿಸಿದನೆಂದೂ ನೆರೆಹೊರೆಯವರಿಂದ ರುಜುವಾತು ಮಾಡಿಸಿದರು. ಶಿವಣ್ಣನು ರಸ್ತೆ ಪಕ್ಕದಲ್ಲಿ ಯಾರನ್ನೋ ಬೀಳಿಸಿಕೊಂಡು ಒಂದು ಬಟ್ಟೆಯನ್ನು ಬಿಗಿಯುತ್ತಿದ್ದ ಹಾಗೆ ಕಂಡುಬಂದುದನ್ನು ನೋಡಿದೆನೆಂದು ದಾರಿಯಲ್ಲಿ ಹೋಗುತ್ತಿದ್ದವರೊಬ್ಬರು ಸಾಕ್ಷ್ಯ ನುಡಿದರು. ಇದೆಲ್ಲವನ್ನೂ ಒಟ್ಟುಗೂಡಿಸಿ ಪೋಲೀಸಿನವರು ಶಿವಣ್ಣನು

ಜಿದ್ದಿನಿಂದ ತನ್ನನ್ನು ಸಿಕ್ಕಾಪಟ್ಟೆ ಬೈದ ಭಿಕ್ಷುಕನನ್ನು ನಿರ್ಜನವಾದ ರಸ್ತೆಯಲ್ಲಿ ಒಂಟಿಯಾಗಿ ಸಿಕ್ಕಿದುದನ್ನು ಕಂಡು ಅವನನ್ನು ಬೀಳಿಸಿ, ರಸ್ತೆ ಪಕ್ಕದಲ್ಲಿಯೇ ತನ್ನ ವಸ್ತ್ರವನ್ನು ಅವನ ಕುತ್ತಿಗೆಗೆ ಬಿಗಿದು ಖೂನಿ ಮಾಡಿ, ಅಷ್ಟುಹೊತ್ತಿಗೆ ಯಾರೋ ಬರಲಾಗಿ ತಾನೇ ಶವವನ್ನು ಕಂಡುಹಿಡಿದವನಂತೆ ನಟಿಸಿ, ಪೋಲೀಸಿನವರಿಗೆ ವರ್ತಮಾನ ಕಳುಹಿಸಿದಂತೆ ತೋರ್ಪಡಿಸುತ್ತಿದ್ದಾನೆಂದು ವಾದಿಸಿದರು.

ಭಿಕ್ಷುಕನು ಹೊಟ್ಟೆಗಿಲ್ಲದೆ ಸತ್ತುಬಿದ್ದಿದ್ದನೆಂದೂ, ಅವನ ಕುತ್ತಿಗೆಯಲ್ಲಿ ಇದ್ದ ಗುರುತು ಅವನು ಕುತ್ತಿಗೆಗೆ ಬಟ್ಟೆಯಿಂದ ಕಟ್ಟಿಕೊಂಡಿದ್ದ ತಾಯತಿಯ ಗುರುತೆಂದೂ, ಶಿವಣ್ಣನು ಮೂರು ದಿನಗಳ ಹಿಂದೆ "ನೋಡು, ನಿನಗೆ ಮಾಡುತ್ತೇನೆ" ಎಂಬ ಭಿಕ್ಷುಕನಿಗೆ ಹೇಳಿದ್ದ ಮಾತು ಬರೀ ಕೋಪದಿಂದ ಹೇಳಿದ ಮಾತೇ ಹೊರತು ಅದಕ್ಕೆ ಖೂನಿ ಮಾಡುತ್ತೇನೆಂದು ಅರ್ಥ ಮಾಡಬಾರದೆಂದೂ, ಅಲ್ಲದೇ ಆ ಭಿಕ್ಷುಕನು ಥಾಂಡಿಗನಾಗಿದ್ದ ಬೇರೆಯೊಬ್ಬನೆಂದೂ, ಈಗ ಸತ್ತುಹೋಗಿದ್ದವನಲ್ಲವೆಂದೂ ಶಿವಣ್ಣನ ಲಾಯರು ವಾದಿಸಿದರು.

ಸೆಷನ್ಸಿನಲ್ಲಿ ಶಿವಣ್ಣನು ಅಪರಾಧಿಯೆಂದೇ ತೀರ್ಮಾನವಾಗಿ, ಅವನು ಮಾಡಿದ ದುಷ್ಕೃತ್ಯಕ್ಕೆ ಗಲ್ಲಿಗೇರಿಸಲ್ಪಡಬೇಕೆಂದು ಶಿಕ್ಷೆ ವಿಧಿಸಲ್ಪಟ್ಟಿತು. ಅದರ ಮೇಲೆ ಅಪೀಲು ಮಾಡಲು, ಅಪೀಲು ತಿರಸ್ಕೃತವಾಗಿ ಶಿಕ್ಷೆಯು ಖಾಯಂ ಮಾಡಲ್ಪಟ್ಟಿತು. ಶಿವಣ್ಣನು "ಸಮಾಜ, ಸಮಾಜ ಧರ್ಮ, ಸಮಾಜದಲ್ಲಿ ಜವಾಬ್ದಾರಿ" ಎಂದು ಬಾಯಲ್ಲಿ ಮಾತ್ರ ಹೇಳುತ್ತಾ, ಕೈಯ್ಯಲ್ಲಿ ಇಂತಹ ಹೀನಕೃತ್ಯವನ್ನು ಮಾಡಿದುದರಿಂದ ಮರಣ ದಂಡನೆಗಿಂತ ಕಡಿಮೆ ಶಿಕ್ಷೆಯು ಸರಿಯಲ್ಲ ಎಂದು ಅಭಿಪ್ರಾಯಪಟ್ಟರು........

ಶಿವಣ್ಣನು ಪ್ರಾಣಭಿಕ್ಷೆಗೆ ಅರ್ಜಿಸಲ್ಲಿಸಿದ್ದಾನೆ. ಇದೂ ತಿರಸ್ಕೃತವಾಗಿದೆಯೆಂದು ವರ್ತಮಾನ. ನಾಳೆ ಸೋಮವಾರ ಬೆಳಿಗ್ಗೆ ಅಂತ್ಯಶಿಕ್ಷೆಯು ನಡೆಸಲ್ಪಡುತ್ತೆ. ಆಗ ಅವನು ಪೂರ್ಣವಾಗಿಯೂ ತೀರಿಸುತ್ತಾನೆ—ತನ್ನ ಸಮಾಜಋಣ!

---

ಕೊರವಂಜಿ ಸಂಪಾದಕರಲ್ಲಿ ನಮಸ್ಕಾರಗಳು.

ಹಿರಿಯರು ನಾವು ತೀರಿಸಬೇಕಾದ ಋಣಗಳಲ್ಲಿ ಮೂರನ್ನೇ ಹೇಳಿ ಈ ಮೇಲೆ ಹೇಳಿದ ನಾಲ್ಕನೆಯದನ್ನು ಸೇರಿಸದೆ ತುಂಬಾ ಅನ್ಯಾಯ ಮಾಡಿದ್ದಾರೆ. ಆದುದರಿಂದ ಜನರ ತಿಳುವಳಿಕೆಗಾಗಿ ತಾವು ಇದನ್ನು ಪ್ರಕಟಿಸಲೇ ಬೇಕು. ಇದು ತಾವು ತೆರಬೇಕಾದ—ಸಮಾಜ ಋಣ !

ತಮ್ಮ ವಿಶ್ವಾಸಿ,

ಬೀರಣ್ಣ.

---

# ಶಾನುಭೋಗರ ಮಗನು

ಶಾನುಭೋಗರ ಮಗನು, ತಾಯಿಯಿಲ್ಲದ ಹುಡುಗ
ತೇರಿನಂತಹ ಧೀರ, ಕೇರಿಗೆಲ್ಲ!
ಬಲಭೀಮ, ಬೀ ಎಸ್ ಸಿ, ಹೆಸರು ವೆಂಕಣ್ಣಯ್ಯ,
ಇಪ್ಪತ್ತು ತುಂಬಿಹುದು, ಮದುವೆ ಇಲ್ಲ.
ತಾಯಿಯಿಲ್ಲದ ಹುಡುಗ! ತಂದೆಗವನೇ ಪ್ರಾಣ,
ಮತ್ತೊಬ್ಬಳನ್ನವರು ವರಿಸಲಿಲ್ಲ!
ತಂದೆಯಂದದಿ ತಾನು ಸುತ್ತ ಮೂರೂರುಗಳ
ಲೆಕ್ಕವನು ಬರೆಯುವುದೆ, ಅವನ ಕನಸು!
ಮೊನ್ನೆ ಡೀಸಿಯವರ ಹಿರಿಯ ಮಗ ಖುದ್ದಾಗಿ
ವರನ ಕೇಳಲು ಬಂದರವರ ಮನೆಗೆ.
"ಸಾಹೆಬರ ಮನೆಗಳಲಿ ಸೊಂಟ ಡೊಂಕಾಗುವುದು,
ಒಲ್ಲೆ"ನೆಂದನು ವೆಂಕು ಬಾಗಿಲಲ್ಲೆ!
ಮಗನನ್ನು ಬಹು ವಿಧದಿ ಬೇಡಿಕೊಂಡರು ತಂದೆ
ತಾ ಕಂಡ ಕನಸುಗಳು ನನಸಾಗಲು!
ಛಲವ ಹಿಡಿದನು ವೆಂಕು; ಕೇಳಬೇಕೇ ಇನ್ನು;
ಕಂಬಿ ಕಿತ್ತನು ಆತ ಹಿಂದಕೇನೆ!
ಬೆಳಗಾಗ ಹೊಲದ ಬಳಿ ನನ್ನ ತಮ್ಮನ ಕಂಡು
ಹೊರಗೆಡಹಿದನು ವೆಂಕು ಕಾರಣವನು—
"ಡೀಸಿಯವರೇ ಬಂದು ಸೀಸಿ ಮಾಡಲಿ ನಮ್ಮ!
ತಂದೆ ಇರವಿಗದುವೆ ಒಪ್ಪು!" ಎಂದು.
ನಮ್ಮೂರ ನವಗ್ರಾಮ ಬಿ.ಎಸ್‌ಸಿ, ವೆಂಕುವನು
ಪಡೆಯಬೇಕೆ, ಇಂಥ ಪಿತ್ತವುಂಟೆ?
ಶಾನುಭೋಗರ ವಿತ್ತ ವಿನಯಗಳೆ ಹೇಳುವುವು—
ವೆಂಕುವಂತಹ ವರಗಳಿಲ್ಲವೆಂದು.
ಶಾನುಭೋಗರ ಮಗನು ತೇರಿನಂತಹ ಧೀರ
ಮಾವ ಸಿಕ್ಕುವುದೊಂದು ಕಷ್ಟವಲ್ಲ!
ಸರಿಯಾದ ಸೊಸೆಯೊದಗಿ ಆ ಹೊಸಲು ಹಸುರಾಗಿ
ನಲಿದಾಡಲಾಕುಲವು! ಅಷ್ಟೆ ಸಾಕು!

—ಪಾಟಾಳಿ.

("ಮೈಸೂರು ಮಲ್ಲಿಗೆಯನ್ನನುಕರಿಸಿದ್ದು")

—o—



## ಕೇಸರಿ ಕುಟೀರಂ ಲಿ., ಮದರಾಸು

### ಲೋಧ್ರ—ಗರ್ಭಾಶಯ ಟಾನಿಕ್

ಅಕ್ರಮ ಮುಟ್ಟು, ಬಂಜೆತನ, ಗರ್ಭಜವಾಯು, ನಿದ್ರಾಭಂಗ, ಅಜೀರ್ಣ, ಮಲಬದ್ಧತೆ, ಕೆಮ್ಮು, ತಲೆನೋವು, ಬೆನ್ನುನೋವು ಮುಂತಾದುವನ್ನು ವಾಸಿಮಾಡುವುದು.

### ಅರ್ಕ—ಶ್ರೇಷ್ಠ ಜ್ವರ ನಿವಾರಿಣಿ

ಇನ್ಫ್ಲೂಯೆಂಜಾ, ಟೈಫಾಯಿಡ್, ಮಲೇರಿಯ ಮುಂತಾದ ಎಲ್ಲಾ ವಿಧವಾದ ಜ್ವರಗಳನ್ನೂ ಪ್ಲೀಹ ಮತ್ತು ಪಿತ್ತಕೋಶ ರೋಗಗಳನ್ನೂ ಗುಣಪಡಿಸುವುದು.

### ಅಮೃತ—ರಕ್ತಶುದ್ಧಿ ಟಾನಿಕ್

ಎನೀಮಿಯ, ಮಲಬದ್ಧತೆ, ಅಜೀರ್ಣ, ನಿಶ್ಶಕ್ತಿ, ಬುದ್ಧಿಮಾಂದ್ಯ, ಎದೆಯ ನಿಶ್ಶಕ್ತಿ, ಜ್ಞಾಪಕಶಕ್ತಿ ಇಲ್ಲದಿರುವದು, ದೃಷ್ಟಿಮಾಂದ್ಯ, ತಲೆ ತಿರುಗುವುದು, ಚರ್ಮ ರೋಗಗಳು ಮುಂತಾದುವನ್ನು ವಾಸಿಮಾಡುವುದು.

ಏಜಂಟರು :

**ಸಿಟಿ ಮೆಡಿಕಲ್ ಅಂಡ್ ಜನರಲ್ ಏಜನ್ಸಿ,**

**ಚಿಕ್ಕಪೇಟೆ, : : : ಬೆಂಗಳೂರು ಸಿಟಿ.**




# ನಿಮ್ಮ ಮನೆಗಳು ಮೈಸೂರು ದೀಪಗಳಿಂದ ಬೆಳಗಲಿ !

ಮೈಸೂರು ವಿದ್ಯುತ್ ಬಲ್ಬುಗಳು ಅತ್ಯಂತ ಪ್ರಕಾಶಮಾನವಾದುವು.

---

ಬಾಳಿಕೆ ಹೆಚ್ಚು ! ಬೆಲೆ ಸುಲಭ !!

**ನಮ್ಮ ದೇಶದಲ್ಲಿಯೇ ತಯಾರಾದ ಸ್ವದೇಶಿ ಮಾಲು**

---

## ಮೈಸೂರು ಲ್ಯಾಂಪ್ ವರ್ಕ್ಸ್, ಲಿ.

ಮಲ್ಲೇಶ್ವರಂ - - ಬೆಂಗಳೂರು

ಆನಂದ್ ಬ್ರದರ್ಸ್‌ರವರ ಇದೊಂದು
ಹೊಸ ಕಲಾಕೃತಿ

# ಜ ಮಾ ನ್

ದುರ್ಗಾಖೋಟೆ - ಕುರ್ಷೀದ್ - ಡೇವಿಡ್
ನವೀನ್ ಯಾಗ್ನಿಕ್

— ಇತ್ಯಾದಿ ನುರಿತ ನಟನಟಿಯರು —

ಶೀಘ್ರದಲ್ಲಿಯೇ ಬೆಂಗಳೂರು ನಗರದ
ಪ್ಯಾರಾಮೌಂಟ್ ಥಿಯೇಟರಿನಲ್ಲಿ
ಪ್ರದರ್ಶಿಸಲ್ಪಡುವುದು

---

ವಿವರಗಳಿಗೆ:

ಗುಡ್‌ವಿನ್ ಪಿಕ್ಚರ್ಸ್ ಕಾರ್ಪೊರೇಷನ್
ಸುಬೇದಾರ್ ಛತ್ರಂ ರಸ್ತೆ, ಬೆಂಗಳೂರು ಸಿಟಿ

ಅಲ್ಲದೆ, ಬೆಜವಾಡ — ತಿರುಚನಾಪಳ್ಳಿ — ಎರ್ನಾಕುಲಂ — ಶಾಖೆಗಳು.

— ಬರೆಯಿರಿ.

